॥ ಶ್ರೀಃ ॥

॥ ಶ್ರೀಮತೇ ರಾಮಾನುಜಾಯ ನಮಃ ॥

# ದಿವ್ಯವಾತ್ಸಲ್ಯಾಮೃತವಾಹಿನೀ

## ಶ್ರೀ ಭಗವದ್ ಗೀತಾ

(ಪ್ರಥಮ ಷಟ್ಕಮ್)

"ಲೋಕಹಿತೈಷಿಣೀ" ಎಂಬ ಕನ್ನಡ ಅನುವಾದ ಸಮೇತ

ಮಂ. ಎ. ಅ. ರಂಗಾಚಾರ್ಯ ಪ್ರಕಾಶನ

ಪ್ರಥಮ ಮುದ್ರಣ

ಸ್ವಭಾನು ಪುಷ್ಯ ಬಹುಳ ಏಕಾದಶಿ,
ಭಾನುವಾರ ದಿನಾಂಕ 18-01-2004

ಪ್ರತಿಗಳು ೧೦೦೦

ಪ್ರಾಪ್ತಿ ಶುಲ್ಕ : **22-00**

ಅನುವಾದಕರು :
ಮಂ. ವೀ. ರಂ। ವರದರಾಜೈಯ್ಯಂಗಾರ್ಯನಾಮಾ
ಯದ್ವದ್ರಿಯತಿರಾಜ ಶ್ರೀನಾರಾಯಣಮುನಿದಾಸಃ

॥ ಶ್ರೀಃ ॥

॥ ಶ್ರೀಮತೇ ರಾಮಾನುಜಾಯ ನಮಃ ।

# ದಿವ್ಯವಾತ್ಸಲ್ಯಾಮೃತವಾಹಿನೀ ಶ್ರೀ ಭಗವದ್ಗೀತಾ

## 'ಲೋಕಹಿತೈಷಿಣೀ' ಕನ್ನಡವ್ಯಾಖ್ಯಾಸಮೇತಾ

## ೧. ಮಙ್ಗಳ ಪದ್ಯಗಳು

ಗೀತಾಂ ಗಾಢತಮೋರಜಃ ಪ್ರಶಮನೀಂ ತತ್ತ್ವಪ್ರಕಾಶಪ್ರದಾಂ
ಗುಹ್ಯಾಃ ಕರ್ಮ-ಸುಧೀ-ಸುಭಕ್ತಿ-ಸರಣೀಃ ಸಂದರ್ಶ್ಯ ಕೃಷ್ಣಂ ಶ್ರಿತಾಮ್ ।
ಗೋವಿನ್ದೋಕ್ತಿಸುಧಾರಸೋರ್ಮಿಭರಿತಾಂ ತತ್ಪ್ರೇಮನಿಷ್ಯನ್ದಿನೀಂ
ಗಾಹಂ ಗಾಹಮಿಮಾಂ ಭಜೇಮ ಸುಜನಾಃ ಸೌಭಾಗ್ಯಸಾರಙ್ಗಮಾಃ ॥೧॥

ಗಾಢವಾದ ತಮೋಗುಣರಜೋಗುಣಗಳನ್ನು ಶಮನಮಾಡಿ ತತ್ತ್ವಯಾಥಾತ್ಮ್ಯಜ್ಞಾನದ ಬೆಳಕನ್ನು ಕೊಡುವಂತಹ, ವೇದೋಪನಿಷದ್ ಇತಿಹಾಸ ಪುರಾಣಧರ್ಮಶಾಸ್ತ್ರ ಪಾಂಚರಾತ್ರಾಗಮಗಳಲ್ಲಿ ಗುಹ್ಯವಾಗಿ ಅಡಗಿರುವ ಕರ್ಮಯೋಗ-ಜ್ಞಾನಯೋಗ-ಭಕ್ತಿಯೋಗ ಮಾರ್ಗಗಳನ್ನು ಚೆನ್ನಾಗಿ ತೋರಿಸಿಕೊಟ್ಟು ಕೊನೆಗೆ ಶ್ರೀ ಕೃಷ್ಣನನ್ನೇ ನೇರವಾಗಿ ಆಶ್ರಯಿಸಿ ತೃಪ್ತಳಾಗಿರುವಂತಹ, ಗೋವಿಂದನ ಸಿರಿನುಡಿಗಳ ಅಮೃತತರಂಗಗಳಿಂದ ಭರಿತಳಾಗಿರುವಂತಹ, ಅವನ ಪ್ರೇಮದ (ದಿವ್ಯವಾತ್ಸಲ್ಯದ) ವಾಹಿನಿಯಾಗಿ ಹರಿಯುತ್ತಿರುವಂತಹ, ಈ ಗೀತಾ (ನದೀ) ಮಾತೆಯನ್ನು ಸತತವೂ ಅವಗಾಹನೆ

ಮಾಡುತ್ತಾ ಸೇವಿಸೋಣ, ಬನ್ನಿರಿ, ಬನ್ನಿರಿ, ಜೀವನದ ಪರಮಭಾಗ್ಯದ (ಧನ್ಯತೆಯ) ಸಾರವನ್ನು ಕಾಣಲು ಹೊರಟಿರುವ ಸಜ್ಜನ್ನ ಮಹೋದಯರೇ! ॥೧॥

ಸರ್ವೋಪನಿಷದೋ ಗಾವೋ, ದೋಗ್ಧಾ ಗೋಪಾಲನನ್ದನಃ।
ಪಾರ್ಥೋವತ್ಸಃ, ಸುಧೀರ್ಭೋಕ್ತಾ, ದುಗ್ಧಂ ಗೀತಾಮೃತಂ ಮಹತ್ ॥೨॥

ಎಲ್ಲ ಉಪನಿಷದಾವಳಿಯಾಯಿತು ಗೋವೃಂದ
ಗೊಲ್ಲರ ನಂದನ ಅವನಾದ ಕರೆಯುವವ ಚಂದ
ಬಿಲ್ಲರ ಮಲ್ಲನನವನಾದ ಗೋವುಗಳ ಕಂದ
ಬಲ್ಲವನವನೆಲೆ ಭೋಗಿಪನು ಗೀತಾಮೃತಾನಂದ ॥೨॥

ಏಕಂ ಶಾಸ್ತ್ರಂ ದೇವಕೀ ಪುತ್ರಗೀತಂ
ಏಕೋ ದೇವಃ ದೇವಕೀ ಪುತ್ರ ಏವ।
ಏಕೋ ಮನ್ತ್ರಃ ದೇವಕೀ ಪುತ್ರ ನಾಮ।
ಕರ್ಮಾಪ್ಯೇಕಂ ದೇವಕೀ ಪುತ್ರಸೇವಾ ॥೩॥

ಒಂದೇ ತತ್ತ್ವಶಾಸ್ತ್ರ - ಅದು ದೇವಕೀ ಪುತ್ರನು ಉಲಿದ ಗೀತೆ;
ಒಬ್ಬನೇ ದೇವ - ಅದು ದೇವಕೀ ಪುತ್ರನು ತಾನೇ;
ಒಂದೇ ಮನ್ತ್ರ - ಅದು ದೇವಕೀ ಪುತ್ರನ ಶ್ರೀನಾಮ;
ಕರ್ಮವೂ ಒಂದೇ - ಅದು ದೇವಕೀ ಪುತ್ರನ ಸೇವೆ ॥೩॥

**ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।**
**ದೇವಕೀ ಪರಮಾನನ್ದಂ ಕೃಷ್ಣಂ ವನ್ದೇ ಜಗದ್‌ಗುರುಮ್ ॥೪॥**

ಶಿಷ್ಟಾಗ್ರಣ್ಯರಾದ ವಸುದೇವರ ಕುಲಪುತ್ರ (ಎಲ್ಲ ಶಿಷ್ಟಾಗ್ರಗಣ್ಯರಿಗೂ ಸುಪುತ್ರನೋಪಾದಿ ಪ್ರಿಯಕರ) ಅದ್‌ಭುತಲೀಲೆ ಅನುಪಮಕಾನ್ತಿ ಅಸ್ಖಲಿತಜಯಶೀಲತೆಗಳಿಗೆ ಆಗರನಾಗಿರುವ ದೇವದೇವ (ಆದ್ದರಿಂದಲೇ ಅವತಾರ ಲೀಲೆಗಳಿಂದ ಶಿಷ್ಟಪರಿಪಾಲನೆ ದುಷ್ಟನಿಗ್ರಹ ಧರ್ಮಸಂಸ್ಥಾಪನಾದಿ ಕಾರ್ಯಗಳ ಮೂಲಕ ಸ್ಥಿತಿ ಕಾರ್ಯವನ್ನು ಅನಾಯಾಸವಾಗಿ ಮಾಡುವವನು) ; ಕಂಸಚಾಣೂರಾದಿ ದುರ್ಜನಮರ್ದನ (ಆಶ್ರಿತರ ಅಹಂಕಾರಮಮಕಾರಾದಿ ಸಕಲ ದುರ್ಗುಣಗಳ ಮರ್ದನ) ; ಎಲ್ಲರ ಕಣ್ಮನಗಳನ್ನಾಕರ್ಷಿಸಿ ಆನಂದ ನೀಡುವ ಕೃಷ್ಣ ; ಅಧರ್ಮವ ತೊಡೆದು ಧರ್ಮವ ಮೆರೆಸಿ ಭೂದೇವಿಗೆ ನೆಮ್ಮದಿ ನೀಡುವ ಕೃಷ್ಣ, ಅಮೃತಮಯಗೀತೆಯ ವಚನಗಳ ಜಗಕೆ ನೀಡಿ,ಪಾರ್ಥನ ನೆಪದಲಿ ಇಡೀ ನರಲೋಕಕೆ ಆದಿಗುರುವಾದ ಪರಮ ಕರುಣಾಳು ಕೃಷ್ಣ. ಇಂಥವನ, ಅಂಥವನ, ಎಂತೆಂತಹವರಿಗೂ ಬಣ್ಣನೆಯಲಿ ಭಾವನೆಯಲಿ ಹಿಡಿದಿಡಲು ನಿಲುಕದಂತಹವನ, ವಂದಿಪೆನು, ವಂದಿಸುತ್ತಲೆ ಇರದೆ ಮತ್ತೆ. ತಾನೆಂದಿಪೆನು !



# ೨. ಮಾನವಜನ್ಮ ಧನ್ಯತೆಗಾಗಿ ಗೀತೆ

ಅನಾದಿಕಾಲದಿಂದಲೂ ದೇಹದಿಂದ ದೇಹಕ್ಕೆ ಯಾತ್ರೆ ಮಾಡುತ್ತಾ ಬಂದಿರುವ ಜೀವಾತ್ಮಗಳು ನಾವು. ಮರ-ಬಳ್ಳಿ-ಪೊದೆ, ಮೃಗ-ಪಕ್ಷಿ-ಕ್ರಿಮಿ, ಇತ್ಯಾದಿ ಸ್ಥಾವರ ಜನ್ಮಗಳು ಹಾಗೂ ತಿರ್ಯಗ್‌ಜಂತು ಜನ್ಮಗಳು, ಹಾಗೆಯೇ ನರಜನ್ಮಗಳು ಮತ್ತು ಸುರಜನ್ಮಗಳು, ಹೀಗೆ ನಾಲ್ಕು ವಿಧವಾದ ಜನ್ಮಗಳಲ್ಲಿ, ವಿಧ ವಿಧವಾದ ದೇಹಗಳಲ್ಲಿ ವಿಧ ವಿಧವಾದ ಸುಖ-ದುಃಖಗಳ ಅನುಭವ, ನಮ್ಮಂತಹ ಕರ್ಮಬದ್ಧ ಜೀವಾತ್ಮಗಳಿಗೆ ! 'ಮಾಡಿದ್ದುಣ್ಣೋ ಮಹಾರಾಯ' ಎಂಬ ನಿಯಮಕ್ಕೆ ಯಾರು ತಾನೇ ಒಳಪಟ್ಟಿಲ್ಲ ನಮ್ಮಲ್ಲಿ ? ಆದ್ದರಿಂದ ನಾವೆಲ್ಲರೂ ಕರ್ಮಬದ್ಧರೇ. 'ದುರ್ಲಭಂ ಮಾನುಷಂ ಜನ್ಮ' ಎಂಬುದಾಗಿ ಪ್ರಹ್ಲಾದಾಳ್ವಾನ್ ಹೇಳಿದಂತೆ ಅಕಸ್ಮಾತ್ತಾಗಿ ಭಗವತ್ಕೃಪೆಯಿಂದ, ಅತಿ ದುರ್ಲಭವಾದ ಮಾನುಷಜನ್ಮ ಈಗ ಸಿಕ್ಕಿ ಬಿಟ್ಟಿದೆ ! ಸುರಜನ್ಮ, ಎಂದರೆ ದೇವತೆಯ ಜನ್ಮ, ದೊರೆತಿದ್ದರೂ, ಭೋಗ ಲಂಪಟತೆಯಲ್ಲಿ ಮುಳುಗಿ ಹೋಗುತ್ತಿದ್ದೆವೋ ಏನೋ ? ಸಂಕಟ ಬಂದಾಗಲಾದರೂ 'ವೆಂಕಟರಮಣ!' ಅನ್ನಬಹುದಾದ ದುರ್ಲಭ ಮನುಷ್ಯ ಜನ್ಮದ ಲಾಭ ನಮಗೀಗಾಗಿದೆ ! ಮುಂದೆ, ಹಲ್ಲಿ-ನೊಣ-ಸೊಳ್ಳೆ-ತಿಗಣೆ ಇತ್ಯಾದಿ ಜನ್ಮ ಪಡೆಯುವದಕ್ಕಾಗಿ ಈ ಜನ್ಮದಲ್ಲಿ ನಾವು ಸಾಧನೆ ಮಾಡಿಕೊಳ್ಳುತ್ತಿದ್ದೇವೆಯೋ ? ನರಕಕ್ಕೆ ಹೋಗಿಬೀಳುವುದಕ್ಕಾಗಿ ತಯಾರಿಮಾಡಿಕೊಳ್ಳುತ್ತಿದ್ದೇವೆಯೋ ? ಸ್ವರ್ಗಕ್ಕೆ ಹೋಗಿ ಅಪ್ಸರಸ್ತ್ರೀ ಭೋಗ ಪಡೆಯುವುದಕ್ಕಾಗಿ ಪುಣ್ಯದ ಮೂಟೆ ಕಟ್ಟುತ್ತಿದ್ದೇವೆಯೋ ? ಅನಂತ-ಅನವಧಿಕ-ಜ್ಞಾನಾನಂದಾನುಭವ

ಮಯಮೋಕ್ಷಕ್ಕಾಗಿ ಮನಸ್ಸು ಮಾಡಿ, ಪುಣ್ಯ ಪಾಪಗಳೆರಡನ್ನೂ ತ್ಯಜಿಸಿ, ನಿರ್ಲಿಪ್ತವಾದ ಭಗವತ್‌ಪ್ರಿಯ ಮಾರ್ಗದಲ್ಲಿ ಶಾಂತವಾಗಿ ಜೀವನ ಯಾತ್ರೆ ನಡೆಸುತ್ತಿದ್ದೇವೆಯೋ ? ನಮ್ಮ ನಮ್ಮ ಅಂತರಾತ್ಮಕ್ಕೇ ವೇದ್ಯವಿದು.

ಜೀವನಕ್ಕೊಂದು ಧ್ಯೇಯವುಂಟೇ? ಹಾಗೊಂದು ಧ್ಯೇಯವಿರಬೇಕೇನು ? ಯಾವುದಾದರೂ ನಾಯಿ ಹಂದಿ ಹಸು ಕುದುರೆಗೆ, ಯಾವುದೇ ಪ್ರಾಣಿಗೆ, ಜೀವನಧ್ಯೇಯದ ಬಗ್ಗೆ ವಿಚಾರ ಹುಟ್ಟುತ್ತದೆಯೇ? ಬದುಕುವುದು ತಿನ್ನುವುದಕ್ಕೋ ? ತಿನ್ನುವುದು ಬದುಕುವುಕ್ಕೋ ? ತಿನ್ನುವುದು ಬದುಕುವುದು ಕಷ್ಟಪಡುವುದಕ್ಕೋ ? ಸುಖಪಡುವುದಕ್ಕೋ? ಸುಖಪಡುವುದೇ ಗುರಿಯಾದರೆ ಸುಖವು ಶಾಶ್ವತವಾಗಿರದೆ ಕ್ಷಣ ಕಾಲ ಮಾತ್ರ ಮಿಂಚಿ ಹೋಗಿಬಿಡುತ್ತದೆ ಎಂಬೀ ಕಟುಸತ್ಯಕ್ಕೇನು ಮದ್ದು ? ದೇಹದ ತೊಂದರೆ, ಮನಸ್ಸಿನ ವೇದನೆ, ಪರಿಸ್ಥಿತಿಯ ಪ್ರಕೋಪ, ಇವುಗಳು ಪದೇ ಪದೇ ಕಾಡಿಸುವುದಕ್ಕೇನು ಮದ್ದು ? ಈ ಕಹಿ-ಸಿಹಿಗಳ ಚಕ್ರಭೀಮನ ಕೋಟೆಯಲ್ಲಿ ಸುತ್ತಿ ಸುತ್ತಿ ಸುಣ್ಣವಾಗುತ್ತಾ, ನಾವು ಯಾವ ಧ್ಯೇಯವನ್ನು ಸಾಧಿಸಲು ಸಾಧ್ಯ ? ಜೀವನಕ್ಕಿರಬೇಕಾದುದು ಒಂದು ಧ್ಯೆಯವೋ ಅನೇಕ ಧ್ಯೇಯಗಳೋ ? ಈ ಪ್ರಶ್ನೆಗಳ ಬಗ್ಗೆ ಸ್ವಲ್ಪ ಮಟ್ಟಿಗಾದರೂ ಸರಿಯಾದ ತಿಳುವಳಿಕೆಯುಂಟಾದರಷ್ಟೆ, ಮನುಷ್ಯ ಪ್ರಾಣಿಗೆ ಜ್ಞಾನ ಸ್ವಲ್ಪ ಇದೆ ಎನ್ನಬಹುದು ? ಇಲ್ಲದಿದ್ದರೆ ಇತರ ಪ್ರಾಣಿಗಳಿಗಿಂತ ವ್ಯತ್ಯಾಸವೇನು?

ಜ್ಞಾನವಾನ್ ಮಾನವಃ ಪ್ರೋಕ್ತಃ = ಜ್ಞಾನವಂತ ಪ್ರಾಣಿ / ವ್ಯಕ್ತಿಯೇ ಮಾನವ ಎನ್ನುತ್ತದೆ ಗರುಡ ಪುರಾಣ - ಯಾವ ಜ್ಞಾನ ? ಆಹಾರ-ನಿದ್ರಾ-ಮೈಥುನ-ಪ್ರಾಣರಕ್ಷಣೆಗಳನ್ನು ಪಡೆದುಕೊಳ್ಳುವ

ಜ್ಞಾನ, ವಾಸದ ಗೂಡುಗಳನ್ನು ಕಟ್ಟಿಕೊಳ್ಳುವ ಅಥವಾ ಹುಡುಕಿಕೊಳ್ಳುವ ಜ್ಞಾನ, ಪ್ರಾಣಿಗಳಿಗೂ ಉಂಟು! ನಮ್ಮಂತೆ ಅವು ಶಾಲಾ ಕಾಲೇಜುಗಳಲ್ಲಿ ಓದಬೇಕಿಲ್ಲ; ಒಳ್ಳೆಯ ವಸ್ತ್ರಧರಿಸಿ ಕಛೇರಿಗಳಿಗೆ ಹೋಗಿ ಕೆಲಸ ಮಾಡಬೇಕಿಲ್ಲ ; ವಾಹನಗಳಲ್ಲಿ ಓಡಾಡಬೇಕಿಲ್ಲ ; ಧನಸಂಪಾದನೆ ಮಾಡಬೇಕಿಲ್ಲ ; ಹಾಗೆಯೇ ತಮ್ಮ ತಮ್ಮ ದೈನಂದಿನ ಅವಶ್ಯಕತೆಗಳನ್ನೂ ಭೋಗಗಳನ್ನೂ ಪಡೆಯಬಲ್ಲ ಜ್ಞಾನ ಶಕ್ತಿ ಅವುಗಳಿಗಿವೆ!! ಇಂತಹುದೇ ಜ್ಞಾನವನ್ನು ನಾಗರೀಕತೆಯ ರೂಪದಲ್ಲಿ ಬಣ್ಣ ಹಚ್ಚಿ ಬದಲಾಯಿಸಿಕೊಂಡ ಮಾತ್ರಕ್ಕೆ, ನಾವು ಜ್ಞಾನವಂತರಾಗಿ ಬಿಡುತ್ತೇವೆಯೇ ? ಶಾಶ್ವತ ವಸ್ತುಗಳ ದೃಢ ಜ್ಞಾನವಿದ್ದರೆ ಮಾತ್ರ 'ಜ್ಞಾನ'ವೆಂದು ಲೆಕ್ಕಕ್ಕೆ ಬರುವುದು ತತ್ತ್ವವಿಜ್ಞಾನಶಾಸ್ತ್ರದಲ್ಲಿ. ನಾಶಹೊಂದುವ ದೇಹದ ಬಗ್ಗೆ, ಜಡವಾದ ಅನ್ನಪಾನಾದಿ ಸಕಲಭೋಗ್ಯ ವಸ್ತುಗಳ ಬಗ್ಗೆ, ಎಷ್ಟು ಜ್ಞಾನವಿದ್ದರೂ, ಅಜ್ಞಾನವೆಂದೇ ಲೆಕ್ಕ, ಗೀತೆಯಂತಹ ತತ್ತ್ವ-ಹಿತ-ಪುರುಷಾರ್ಥ-ವಿಜ್ಞಾನಶಾಸ್ತ್ರದ ಪ್ರಕಾರ. ಎಷ್ಟೋ ದೇವತೆಗಳ ಪೂಜೆಯಿಂದ, ಶಕ್ತಿ-ಸ್ಥಾನ-ಮಾನ-ಐಶ್ವರ್ಯ-ಸುಖಭೋಗಾದಿಗಳನ್ನು ಪಡೆಯಬಲ್ಲ, ಪುಣ್ಯ ಸಂಪಾದನ ವಿದ್ಯೆಯ ಅಧ್ಯಯನವೂ ಜ್ಞಾನವೂ ಚೆನ್ನಾಗಿ ಇರಬಹುದು, ಗೀತಾಮಾತೆ ಅವರೆಲ್ಲರ ಬಗ್ಗೆ ನಿರ್ಣಯಿಸಿ ಹೇಳುತ್ತಾಳೆ-'' ಸರ್ವಜ್ಞಾನ-ವಿಮೂಢಾಂಸ್ತಾನ್ ವಿದ್ಧಿ ನಷ್ಟಾನ್ ಅಚೇತಸಃ'' ಎಂದು (ಅರ್ಥ: - ಎಲ್ಲ ವಿಧ ಜ್ಞಾನ ತುಂಬಿಕೊಂಡು ವಿಶೇಷ ಮೂಢರಾಗಿರುವ ಅವರನ್ನು ಆತ್ಮನಾಶವಾಗಿರುವ ಬುದ್ಧಿಹೀನರು ಎಂದು ತಿಳಿ). ಅವರ ಬಗ್ಗೆ ಗೀತಾ ಮಾತೆಗೆ ಕೋಪವಲ್ಲ, ಕೊರಗು; ಅಪಾರ ಕೊರಗು! ಆದ್ದರಿಂದಲೇ ಮಾತು ಕರುಳುಹಿಂಡಿಕೊಂಡು ಬಂದಿರುವುದು!

ಮನಷ್ಯನು 'ಧೀರ'ನಾಗಬೇಕು; ಶೀತೋಷ್ಣ ಮಾನಾವಮಾನಾದಿ ಸುಖದುಃಖಗಳ

ಸಹಿಷ್ಣುವಾಗಿ, ಸಮಚಿತ್ತನಾಗಬೇಕು ; 'ಅಮೃತತ್ತ್ವ'ದ ಧ್ಯೇಯಕ್ಕಾಗಿ ಬಾಳಬೇಕು - ಎನ್ನುತ್ತಾಳೆ ಗೀತಾಮಾತೆ. 'ಸೋಽಮೃತತ್ವಾಯ ಕಲ್ಪತೇ' - ಅಧ್ಯಾ ೨, ಶ್ಲೋ ೧೫. ವೇದವೂ ಹೇಳುತ್ತದೆ 'ತತೋಽಮೃತತ್ವಮಶ್ನುತೇ ತತೋಽಮೃತತ್ವಮಶ್ನುತ ಇತಿ' ಎಂದು; 'ಉತ + ಅಮೃತತ್ವಸ್ಯೇಶಾನಃ' - ಅಮೃತತ್ವದ ಒಡೆಯ ಶ್ರೀ ಭಗವಂತ- ಎಂದು. ಮರ್ತ್ಯನಾಗಿ ಜನಿಸಿ, ಅಮೃತತ್ವಕ್ಕಾಗಿ ಸಾಧನೆನಡೆಸಲು ಬೇಕಾದ ಜ್ಞಾನ ಸಂಪಾದಿಸಿ, ಅದನ್ನು ಕೃತಿಗಿಳಿಸುತ್ತಾ, ಬಾಳುವವನೇ ಮಾನವ, ಇದೇ ತಾತ್ಪರ್ಯ 'ಜ್ಞಾನವಾನ್‌ಮಾನವಃ' ಎಂಬ ಮಾತಿಗೆ.

ಆಯುರಾರೋಗ್ಯ- ಐಶ್ವರ್ಯ ಮುಂತಾದವುಗಳಿಗಾಗಿ ದೇವತೆಗಳಲ್ಲೂ ದೇವರಲ್ಲೂ ಬೇಡಿಕೊಳ್ಳುತ್ತಾ, ಇರುವ, ಮತ್ತು ಮುಂದೆ ಬರಬಹುದಾದ, ಆಯಸ್ಸು ಆರೋಗ್ಯ ಐಶ್ವರ್ಯಾದಿಗಳನ್ನು, ಕ್ಷಣಿಕ ಸುಖದಲ್ಲಿ ವ್ಯಾಮೋಹದಲ್ಲಿ ಮನೆಮನೆವಾರ್ತೆಯಲ್ಲಿ ವೈಯಕ್ತಿಕ ವಿಲಾಸ-ವಿಷಾದ-ವೈರಗಳಲ್ಲಿ ಕಳೆದುಬಿಟ್ಟು, ಮೃತ್ಯುವಿನಿಂದ ಮೃತ್ಯುವಿಗೆ, ಪದೇ ಪದೇ ಮುಗಿಯದೆ ಪಯಣಿಸುತ್ತಾ ಬರುವ, ಮನುಷ್ಯ ಜಂತುವಿಗಿಂತಲೂ, ಹಾಗೆ ಯಾವ ದೇವತೆಯನ್ನೂ ಬೇಡಿಕೊಳ್ಳದೆಯೇ, ಅದೇ ರೀತಿ ಬದುಕಿ ಸತ್ತು ಮೃತ್ಯುವಿನಿಂದ ಮೃತ್ಯುವಿಗೆ ಜನ್ಮದಿಂದ ಜನ್ಮಕ್ಕೆ ಯಾತ್ರೆ ನಡೆಸುವ, ಮನುಷ್ಯೇತರ ಜಂತುಗಳು, ಯಾವ ವಿಧದಲ್ಲಿ ಕಡಿಮೆ ? ಇವನಿಗಿಂತ ಅವುಗಳನ್ನು ಒಂದು ವಿಧದಲ್ಲಿ ವಾಸಿಯೆನ್ನಬಹುದೋ, ಏನೋ ! 'ಅಮೃತತ್ವ'ದ ಧ್ಯೇಯವಿಲ್ಲದ ಮಾನವ ಜಂತುವಿಗೆ ಅವನ ಎಲ್ಲ ಉದ್ದಾಮ ಸಾಧನೆಗಳಿಂದಲೂ ಸಿಕ್ಕುವುದು ಮೃತತ್ವವೇ ! 'ಮೃತ್ಯೋರ್ಮಾ ಅಮೃತಂ ಗಮಯ' ಎಂಬುದಾಗಿ ಅಮೃತದ ಧ್ಯೇಯ ಹೊಂದಿ ಸತತವಾಗಿ ಪ್ರಾರ್ಥಿಸುತ್ತಾ ತದನುಗುಣವಾಗಿ ಬದುಕಿನಲ್ಲಿ ವರ್ತಿಸುವ ತಿರ್ಯಗ್-

'ಜಂತುವಿಗಾದರೂ ಪ್ರಾಪ್ತಿಯಾಗಲಿರುವುದು ಅಮೃತತ್ವವೇ ! ಈ ವಿಷಯದಲ್ಲಿ 'ಗಜೇಂದ್ರ'ನ ಮೋಕ್ಷಕ್ಕಿಂತ ಇನ್ನಾವ ನಿದರ್ಶನ ಬೇಕು ?

ಗೀತಾರ್ಥವನ್ನು ಸರಿಯಾಗಿ ಸದಾಚಾರ್ಯರಿಂದ ಅರಿತುಕೊಂಡರೆ ಮಾನವ ಜನ್ಮದ ಧನ್ಯತೆಗೆ ಬೇಕಾದ, ಮಾನವನು ಶಾಶ್ವತ ಅಮರನಾಗುವುದಕ್ಕೆ ಬೇಕಾದ, ಜ್ಞಾನವಿಕಾಸವಾಗುತ್ತದೆ. ಗೀತೆಯ ಶಬ್ದೋಚ್ಚಾರಣೆಯನ್ನು ಸರಿಯಾಗಿ ಕಲಿತು, ಶ್ರದ್ಧೆಯಿಂದ ಗೀತಾ ಪಠನ ಮಾಡುವ ಪರಿಪಾಟಿಯನ್ನು ಬೆಳೆಸಿಕೊಂಡರೆ, ಪುಣ್ಯ ಲೋಕ ಭೋಗಗಳ ಪ್ರಾಪ್ತಿಯುಂಟೆಂದು ಶ್ರೀವರಾಹ ಪುರಾಣೋಕ್ತ 'ಗೀತಾ ಮಾಹಾತ್ಮ್ಯ' ಹೇಳುತ್ತದೆ.

ಶ್ರೀ ಕೃಷ್ಣ ಭಗವಾನನ ಅನುಗ್ರಹವನ್ನು ಆಶಿಸುವ ನಾವೆಲ್ಲರೂ, ಗೀತಾಮಾತೆಯ ದಿವ್ಯವಾತ್ಸಲ್ಯಾಮೃತ ಪಾನ ಮಾಡಿ, ಹೃಷ್ಟಪುಷ್ಟಾತ್ಮರಾಗೋಣ, ಬನ್ನಿರಿ, ಬನ್ನಿರಿ, ಸಜ್ಜನರೇ ! ಮಹಾಜನರೇ !



# ೩. ಒಂದೆರಡು ಅಮೃತದ ಹನಿಗಳು

**(೧) ಧರ್ಮಕ್ಷೇತ್ರೇ ಕುರುಕ್ಷೇತ್ರೇ, ಸಮವೇತಾ ಯುಯುತ್ಸವಃ।**
**ಮಾಮಕಾಃ ಪಾಣ್ಡವಾಶ್ಚೈವ ಕಿಮ್ ಅಕುರ್ವತ ಸಂಜಯ।**

**"ಧರ್ಮಕ್ಷೇತ್ರೇ ಕ್ಷೇತ್ರೇ ಕುರು"**

'ಧರ್ಮ' ಎಂದರೆ ಶಾಸ್ತ್ರವಿಹಿತ ಕರ್ಮಾಚರಣೆ. ಅದರ ಕ್ಷೇತ್ರವಾಗಿದೆ ಈ ಮಾನವಶರೀರವೆಂಬ 'ಕ್ಷೇತ್ರ'. ಇದು ಈ ಚೇತನನ ಸುಖದುಃಖಾನುಭವ ಕ್ಷೇತ್ರ. ಇದರಲ್ಲಿರುವಾಗಲೇ, ಎಲೈ ಜೀವಾತ್ಮನೇ! 'ಕುರು' ಶ್ರೀ ಭಗವಂತನ ಆಜ್ಞೆಯಾಗಿರುವ 'ಧರ್ಮದ' ಅನುಷ್ಠಾನ ಮಾಡು. ಇದನ್ನು ಕಳೆದುಕೊಂಡ ಮೇಲೆ ನಿನಗೀ ಆತ್ಮೋನ್ನತಿಯ ಅವಕಾಶ ಮಾನವ ದೇಹರೂಪದಲ್ಲಿ ಸಿಕ್ಕುವ ಭರವಸೆಯಿಲ್ಲ !

**ಸಮವೇತಾ : ಯುಯುತ್ಸವ :** ಈ ಕ್ಷೇತ್ರದಲ್ಲಿ ಸಮವೇತವಾಗಿವೆ, ಎಂದರೆ, ಸೇರಿವೆ. ಯಾವುವು ? **ಯುಯುತ್ಸವಃ** =ಪರಸ್ಪರ ಹೋರಾಟಕ್ಕೆ ಕಾಯುತ್ತಲೇ ಇರುವಂತಹವು, ಅವು ಯಾವುವು ? **ಮಾಮಕಾಃ ಪಾಣ್ಡವಾಶ್ಚೈವ** (೧) ಮಮಕಾರ ಪಕ್ಷದ ಮನೋಭಾವಗಳು ಮತ್ತು (೨) ಬೆಳ್ಳಗಿರುವ, ಎಂದರೆ ಸಾತ್ತ್ವಿಕ, ಮನೋಭಾವಗಳು. ಇವೆರಡೂ ಆಸುರ ಮತ್ತು ದೈವ ಸ್ವಭಾವದ ಪಕ್ಷಗಳು, ಕ್ರಮವಾಗಿ. ಇವೆರಡೂ ಯಾವಾಗಲೂ ಪರಸ್ಪರ ಹೋರಾಡಿ ತಮ್ಮ ತಮ್ಮ ಕೈ ಮೇಲಾಗಲು ಪ್ರಯತ್ನಿಸುತ್ತಿರುತ್ತಿವೆ.

ಸಂಖ್ಯಾಬಲವು ಮಮಕಾರಅಹಂಕಾರಗಳೆಂಬ ಅವಳಿ-ಜವಳಿ ನಾಯಕರ ಪಕ್ಷವಾದ ಆಸುರ ಪಕ್ಷಕ್ಕೇ ಹೆಚ್ಚು! (ದುರ್ಯೋಧನಾದಿಗಳ ಪಕ್ಷ ಪಾಂಡವರ ಪಕ್ಷಕ್ಕಿಂತ ಒಂದೂವರೆಯಷ್ಟು!)

ಅಕುರ್ವತ ಕಿಮ್ ? ಮಾಡಿದ್ದು ಏನು ? ಇವು ಪರಸ್ಪರ ಹೋರಾಡುತ್ತಲೇ ಬಂದಿವೆ ಅನಾದಿ ಕಾಲದಿಂದಲೂ, ಆದರೆ ಇವು ಸಾಧಿಸಿದ್ದೇನು ಇಲ್ಲಿಯವರೆಗೂ ? ಏನು ಪ್ರಯೋಜನವಾಯಿತು, ಈ ಚೇತನನಿಗೆ ? ಏನೂ ಇಲ್ಲ ! ಈಗಲೂ ಎಂದಿನಂತೆಯೇ ಎದ್ದು-ಬಿದ್ದು ಹೋರಾಡುತ್ತಲೇ ಇವೆ. ಒಮ್ಮೆ ಇದರ ಪತನ, ಒಮ್ಮೆ ಅದರ ಪತನ , ಮತ್ತೆ ಅದೇ ಹೋರಾಟ, ಕೆಡಕು - ಒಳಿತು ಎರಡಕ್ಕೂ. ನಿರ್ಣಾಯಕ ಗೆಲುವು ಯಾವುದಕ್ಕೂ ಇಲ್ಲ. ಆದರೆ ಎಂದಿಗೂ ನಿರ್ಣಾಯಕ ಗೆಲುವು ಆಸುರಕ್ಕೆ ಆಗುವುದೇ ಬೇಡ ! ಎಲೈ ಚೇತನ! ಎಲೈ ಜೀವಾತ್ಮನೇ! ಹಾಗಾಗಲು ಬಿಡಬೇಡ! ಅದು ಮಹಾ ಅಪಾಯ! ನಿನ್ನ ಸರ್ವನಾಶಕ್ಕೆ ಸಮಾನ! ಆದ್ದರಿಂದ —

ಸಂ-ಜಯ! ಸಂ = ಚೆನ್ನಾಗಿ, ತುಂಬ ಉತ್ತಮ ರೀತಿಯಲ್ಲಿ, ಜಯ=ಜಯ-ಶೀಲನಾಗು; ಉದ್ಧಾರವಾಗು; ಎಂದಿಗೂ ಪತನ ಇನ್ನಿಲ್ಲದವನಾಗು. ಅದು ಹೇಗೆ ಸಾಧ್ಯ ? ಧರ್ಮಕ್ಷೇತ್ರವಾದ ಈ ಶರೀರ ಕ್ಷೇತ್ರದಲ್ಲಿರುವಾಗಲೇ, ಸಂ = ಶ್ರೀ ಭಗವಂತನು ಗೀತೆಯಲ್ಲಿ ಉಪದೇಶಿಸಿರುವ ರೀತಿಯ ಉತ್ತಮ ಮನೋಭಾವವನ್ನು ಚೆನ್ನಾಗಿ ದೃಢವಾಗಿ ಧಾರಣೆ ಮಾಡಿಕೊಂಡೇ ಇರು. 'ಕುರು' = ಹಾಗೆಯೇ, ಉತ್ತಮ ಮನೋಭಾವ ಪೂರ್ಣನಾಗಿಯೇ, ಶಾಸ್ತ್ರವಿಹಿತ ಕರ್ಮಾಚರಣೆ ನಡೆಸುತ್ತಾ ಬಾಳು. ಆಗ ಸಂ = ಉತ್ತಮವಾಗಿ ಜಯ = ಜಯಿಸುವೆ.

(ಇದಿಷ್ಟೂ ಶ್ಲೋಕದಲ್ಲಿರುವ ಪದಗಳ ಧ್ವನಿಯಿಂದ ಉಂಟಾದ ಭಾವಾರ್ಥ, ಸಾಮಾನ್ಯ ರೂಢಿಯ ಶಬ್ದಾರ್ಥಗಳ ಪ್ರಕಾರ ವ್ಯಾಖ್ಯಾನವನ್ನು ಪ್ರಥಮಾಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿ ಕಾಣಬಹುದು)

**(೨) ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕ್ವದಾಚನ**
**ಮಾಕರ್ಮಫಲಹೇತುರ್ಭೂಃ ಮಾತೇ ಸಙ್ಗೋಽಸ್ತ್ವಕರ್ಮಣಿ ॥**

ಶಾಸ್ತ್ರವಿಹಿತ ಕರ್ಮಾಚರಣೆ ಮಾಡಲು ಮಾತ್ರ ನಿನಗೆ ಯೋಗ್ಯತೆ. ಅದರಿಂದ ಬರಬಹುದಾದ ಫಲಗಳಲ್ಲಿ ನಿನಗೆ ಯಾವುದೇ ರೀತಿಯ ಸಂಬಂಧದ ಯೋಗ್ಯತೆ ಯಾವಾಗಲೂ ಇಲ್ಲ. ಕರ್ಮಕ್ಕೂ ನೀನು ಕಾರಣನಲ್ಲ. ಫಲಕ್ಕೂ ನೀನು ಕಾರಣನಲ್ಲ ! (ಹಾಗಾದರೆ ಯಾರು ಕಾರಣ ? ಶರೀರ-ಇನ್ದ್ರಿಯ-ಮನಸ್ಸುಗಳ ರೂಪದಲ್ಲಿರುವ ಪ್ರಕೃತಿ, ಮತ್ತು ಈ ಪ್ರಕೃತಿಯ ಸೂತ್ರಗಳನ್ನು ತನ್ನ ಕೈಯಲ್ಲಿ ಧರಿಸಿರುವ ಸೂತ್ರಧಾರನಾದ ದೇವರು, ಕಾರಣ ) ಅಂದ ಮಾತ್ರಕ್ಕೆ 'ಅಕರ್ಮಣಿ ತೇ ಸಙ್ಗೋ ಮಾಸ್ತು' = ಕರ್ಮಾಚರಣೆ ಮಾಡದೆ ಇರುವ ನಿಷ್ಕ್ರಿಯ ಸ್ಥಿತಿಯಲ್ಲಿ, ಎಂದರೆ ಕರ್ತವ್ಯಭ್ರಷ್ಟ ಸ್ಥಿತಿಯಲ್ಲಿ, ಹಾಗೂ ಕರ್ತವ್ಯವಲ್ಲದ ನಿಷಿದ್ಧ ಕರ್ಮ ಮಾಡುವ ದುರಾಚಾರದ ಸ್ಥಿತಿಯಲ್ಲಿ, ನಿನಗೆ ಎಂದಿಗೂ ಸಂಗವಿಲದಿರಲಿ.

**(೩) ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥**

**-- ಶ್ರೀ ಭಗವಾನ್**

"ನನ್ನಲ್ಲಿ ಸರ್ವ ಕರ್ಮಗಳನ್ನೂ ಆಧ್ಯಾತ್ಮ ಬುದ್ಧಿಯಿಂದ ಸಮ್ಯಕ್‌ನ್ಯಾಸ ಮಾಡು; ಫಲದಾಶೆಯಿಂದ

ನಿರ್ಮುಕ್ತನಾಗಿ, ಮಮಕಾರಾದಿಗಳಿಂದ ವಿಯುಕ್ತನಾಗಿ, ಜ್ವರವಿಲ್ಲದವನಾಗಿ, ಯುದ್ಧಮಾಡು''

- ಶ್ರೀ ಭಗವಾನ್

''ಅಧ್ಯಾತ್ಮ'' = ಆತ್ಮನಲ್ಲಿರುವತತ್ತ್ವದಲ್ಲಿ ನಿಷ್ಠವಾದ, ಚೇತಸಾ = ಬುದ್ಧಿಯಿಂದ । ಆತ್ಮನಲ್ಲಿರುವ ತತ್ತ್ವ ಎಂದರೆ ಪರಮಾತ್ಮ (ದೇವರು) ಅವನಲ್ಲಿ ನಿಷ್ಠವಾದ ಎಂದರೆ = ''ಆತ್ಮದ ಆತ್ಮಾ ಪರಮಾತ್ಮಾ, ಪತಮಾತ್ಮನಿಗೆ ಶರೀರ ಈ ನಾನು ಎಂಬ ಆತ್ಮಾ'' ಎಂಬ ದೃಢವಾದ ಗ್ರಹಿಕೆಯುಳ್ಳ ಬುದ್ಧಿಯಿಂದ । ಸಮ್ಯಕ್‌ನ್ಯಾಸ ಮಾಡುವುದು ಎಂದರೆ ಚೆನ್ನಾಗಿ; ಉತ್ತಮ ರೀತಿಯಲ್ಲಿ ಸಮರ್ಪಿಸುವುದು, ಒಪ್ಪಿಸುವುದು. ಏನನ್ನು ಒಪ್ಪಿಸುವುದು ? ಮಾಡಿದ ಮತ್ತು ಮಾಡುತ್ತಿರುವ ಮತ್ತು ಮುಂದೆ ಮಾಡಲಿರುವ ಎಲ್ಲ ಕೆಲಸಗಳನ್ನೂ । 'ಎಲ್ಲ' ಎಂದರೆ ಶಾಸ್ತ್ರೀಯ ಕರ್ಮಗಳನ್ನೂ ಮತ್ತು ಶಾಸ್ತ್ರನಿಷಿದ್ಧವಲ್ಲದ ಎಲ್ಲ ಲೌಕಿಕ ಕೆಲಸಗಳನ್ನೂ । ಇವುಗಳನ್ನೆಲ್ಲ ಪರಮಾತ್ಮನಲ್ಲಿ ಒಪ್ಪಿಸುವುದು ಎಂದರೇನು ? ಪರಮಾತ್ಮನೇ ಸ್ವತಂತ್ರವಾಗಿ ಕೆಲಸ ಮಾಡಿಸುವುದು ತನ್ನ ಶರೀರವಾದ ಈ ನಾನು ಎಂಬ ಆತ್ಮನಿಂದ, ಈ ನನ್ನ ಶರೀರವೆಂಬ ಪ್ರಕೃತಿಯ ಮೂಲಕ, ಎಂದು ದೃಢವಾಗಿ ತಿಳಿಯುವುದು । ಆದ್ದರಿಂದಲೇ ಕರ್ಮಫಲಗಳನ್ನು ''ನನ್ನದು ; ನನಗೇ ಸೇರಬೇಕು'' ಇತ್ಯಾದಿ ಭಾವ ಬೆಳೆಸಿಕೊಂಡು ಆಶಿಸಲು ಈ ಚೇತನನಿಗೆ ಹಕ್ಕಿಲ್ಲ । ಸುಖಫಲ ಬಂದರೆ ಅದನ್ನನುಭವಿಸುವಾಗಲೂ ಈ ಫಲ ಸ್ವತಂತ್ರ ಕರ್ತೃವಿಗೆ ಸೇರಲಿ ಎಂದೇ ಅನುಭವಿಸಬೇಕು. ನನ್ನ ಸಂತೋಷಕ್ಕೆ ಎನ್ನಬಾರದು. ದುಃಖಫಲ ಬಂದರೆ, ಸೂತ್ರಧಾರನು ಕೊಟ್ಟ ಕರ್ಮಪರಿಪಾಕವಿದು ಎಂದನುಭವಿಸುವುದು. ಇದೇ 'ನಿರಾಶೀಃ' ಎಂಬುದರ ಅರ್ಥ ॥ 'ನಿರ್ಮಮಃ'' ನಾನೇ ಅವನ ಶರೀರವಾಗಿ ಅವನ ಸ್ವತ್ತಾಗಿದ್ದೇನೆ. ಇನ್ನು ನನಗೆ ಅವನು ಕೊಟ್ಟಿರುವ ಈ ಶರೀರ, ಇದಕ್ಕೆ ಸಂಬಂಧಪಟ್ಟ ಬಂಧುಗಳು

ವಸ್ತುಗಳು ಎಲ್ಲವೂ ಅವನದೇ ಹೊರತು ನನ್ನವಲ್ಲವೇ ಅಲ್ಲ - ಎಂಬ ನೆಮ್ಮದಿಯ ನಿರ್ಲಿಪ್ತಭಾವ.॥ 'ಜ್ವರ ಬಿಟ್ಟು ಯದ್ಧ ಮಾಡು' ಎಂಬಲ್ಲಿ ಜ್ವರ ಬಿಟ್ಟು ಎಂದರೇನು ? ಈ ಶಾಸ್ತ್ರವಿಹಿತ ಕರ್ತವ್ಯವನ್ನೂ ಅದಕ್ಕನುಗುಣವಾದ ದ್ರವ್ಯಸಂಪಾದನೆ-ಊಟ-ಇತ್ಯಾದಿ ಲೌಕಿಕ ಕರ್ಮಗಳನ್ನೂ ಭಗವಂತನಲ್ಲಿ ಸಮರ್ಪಿಸಿ ಆಚರಿಸುತ್ತಾ, ಫಲದಾಶೆ ಮಮತ್ವ ಎಲ್ಲ ಬಿಟ್ಟದ್ದ ಮಾತ್ರಕ್ಕೆ ಅಮೃತತ್ವ ಸಿದ್ಧಿಸಿಬಿಡುತ್ತದೆಯೇ? ಎಂಬ ಆತಂಕ, ಕುತಾಪ, ಅಪನಂಬಿಕೆಯೇ ಜ್ವರ. ಇಂತಹ ಸಂಶಯ ಜ್ವರ ಬಿಟ್ಟು, ಪರಮಾತ್ಮನೇ ಅಮೃತತ್ವಕ್ಕೆ ಹೀಗೆ ದಾರಿ ತೋರಿಸಿದ್ದಾನೆ. ಅದು ಸಿದ್ಧಿಸಿಯೇ ಸಿದ್ಧಿಸುತ್ತದೆ. ಅವನಿಗೆ ಸಂತೋಷವಾಗುವಂತೆ ಅವನ ಆಜ್ಞಾಕೈಂಕರ್ಯವನ್ನು ನಾನು ಮಾಡುವುದೇ ನನ್ನ ಮಾನವ ಜನ್ಮದ ಧನ್ಯತೆ. ಇನ್ನ್ಯಾವ ಚಿಂತೆಯೂ ನನಗಿಲ್ಲ ಎಂಬ ಸಂತೃಪ್ತಭಾವವೇ ಸಂ-ನ್ಯಾಸದ ಲಕ್ಷಣ, ಜ್ವರ ಬಿಟ್ಟಿರುವುದರ ಲಕ್ಷಣ ಜ್ವರ ಬಿಟ್ಟಿಲ್ಲದಿದ್ದರೆ 'ಸಂ-ನ್ಯಾಸ' ನಿಜವಲ್ಲ, ಸುಳ್ಳು. ಹಾಗೆ ಯುದ್ಧ ಮಾಡಿದರೆ ಅಮೃತತ್ವ ಪ್ರಾಪ್ತಿಯಾಗಲಾರದು. ಜ್ವರಬಿಟ್ಟು ಸರ್ವಕರ್ಮಸಂ-ನ್ಯಾಸಮಾಡಿ ಯುದ್ಧ ಮಾಡಿದರೆ ಅಮೃತತ್ತ್ವ ಪ್ರಾಪ್ತಿ ಕಾಲಾನುಕ್ರಮದಲ್ಲಿ ಆಗಿಯೇ ಆಗುತ್ತದೆ - ಎಂದು ಭಾವ.

'ಯುಧ್ಯಸ್ವ' - ಯುದ್ಧ ಮಾಡು, ಎನ್ನುವುದು ಅರ್ಜುನನಂತಹ ಯೋಧರಿಗೆ (ಕ್ಷತ್ರಿಯರಿಗೆ) ಮಾತ್ರ. ಈ ಮಾತಿನಿಂದ ಮಾನವ ಸಾಮಾನ್ಯರಿಗೆಲ್ಲ ಏನು ಪ್ರಯೋಜನ ? ನಮ್ಮೆಲ್ಲರ ಜೀವನರಂಗವೂ ಒಂದು ರೀತಿಯ ಯುದ್ಧರಂಗವೇ. ಜೀವನವೆಲ್ಲ ಒಳಿತು - ಕೆಡಕುಗಳ ನಡುವೆ ಯುದ್ಧ. ಧರ್ಮ್ಯವಾದರೀತಿಯಲ್ಲಿ, ಎಂದರೆ ಶಾಸ್ತ್ರೋಕ್ತವಾದ ರೀತಿಯಲ್ಲಿ, ಜೀವನ ನಡೆಸುವುದೇ ಒಂದು

ಹೋರಾಟ. ಪ್ರತಿಯೊಬ್ಬನಿಗೂ ಅವನವನ ಹುಟ್ಟಿಗೆ ಮತ್ತು ವಯಸ್ಸಿಗೆ ಅನುಗುಣವಾಗಿ ಏನು ಶಾಸ್ತ್ರವಿಹಿತ ಕರ್ಮಾಚರಣೆ ಇದೆಯೋ, ಅದನ್ನು ನಡೆಸುತ್ತಾ ಜೀವನದ ಧನ್ಯತೆಯನ್ನು ಅವನ ಅನುಗ್ರಹವನ್ನೇ ಅವಲಂಬಿಸಿ ಸಾಧಿಸುವುದೇ, ಇಲ್ಲಿ ಯುದ್ಧಶಬ್ದದಿಂದ ಹೇಳಲ್ಪಟ್ಟಿರುವ ವಿಷಯ. ಈ 'ಯುದ್ಧ'ವನ್ನು ಪ್ರತಿಯೊಬ್ಬರೂ ಸರ್ವ-ಕರ್ಮ-ಸಂನ್ಯಾಸಪೂರ್ವಕವಾಗಿ, ಆಶಾಪಾಶರಹಿತರಾಗಿ, ಮಮಕಾರ ಪಿಶಾಚಗ್ರಸ್ತರಾಗದೆ, ಜ್ವರ ಬಿಟ್ಟು ನಡೆಸಬೇಕೆಂಬ, ಅಮೃತತತ್ತ್ವಪ್ರಾಪ್ತಿರಹಸ್ಯದ ಸಂದೇಶವು ಶ್ರೀಭಗವಂತನಿಂದ ಈ ಅಮೃತವಚನದಲ್ಲಿ ಕೊಡಲ್ಪಟ್ಟಿದೆ.



# ೪. ಕೆಲವು ಸ್ಪಷ್ಟೀಕರಣಗಳು

## ೧) ಗೀತಾರಥವು ಎರಡು ಬಣಕ್ಕೂ ಸೇರದೆ ಅಡ್ಡಲಾಗಿ ನಿಂತಿತು !

ಅರ್ಜುನನು ತನ್ನ ಸಾರಥಿಯಾದ ಅಚ್ಯುತನನ್ನು ಎರಡು ಸೇನೆಗಳ ಮಧ್ಯೆ ತನ್ನ ರಥವನ್ನು ನಿಲ್ಲಿಸಲು ಪ್ರೇರಿಸಿದ್ದುಂಟಷ್ಟೆ. ಯಾವ ಉದ್ದೇಶದಿಂದ ಹೀಗೆ ಹೇಳಿದ ? ತನ್ನನ್ನು ಕೂಡಿ ಯುದ್ಧ ಮಾಡುವ ವೀರರ ಚೆಹರೆಗಳಲಿ ಎಷ್ಟು ಉತ್ಸಾಹವಿದೆ, ತಮ್ಮಿಂದ ಹೊಡೆಯಲ್ಪಡುವ ದುರ್ಬುದ್ಧಿಯಾದ ದುರ್ಯೋಧನನ ಕಡೆಯ ವೀರರ ಚೆಹರೆಗಳಲ್ಲಿ ಎಷ್ಟು ಉತ್ಸಾಹ ಎದ್ದು ಕಾಣುತ್ತದೆ, ಎಂದು ನೋಡುವುದಕ್ಕಾಗಿ ಹಾಗೆ ಹೇಳಿದ. ಹೀಗೆ ಎರಡೂ ಕಡೆ ನೋಡಲನುಗುಣವಾಗಿ ರಥವನ್ನು ಶ್ರೀ ಪಾರ್ಥ ಸಾರಥಿಯು ಎರಡೂ ಸೇನೆಗಳ ಮಧ್ಯೆ ಅಡ್ಡಲಾಗಿ ನಿಲ್ಲಿಸಿರಲೇ ಬೇಕು. ಎದುರಾಳಿಗೆ ಅಭಿಮುಖವಾಗಿ ಅಲ್ಲ. ಹೀಗೆ ನಿಂತದ್ದರಿಂದಲೇ, ಎರಡು ಕಡೆಯೂ, ವೀರರೆಲ್ಲ ಬಾಣಪ್ರಹಾರ ಪ್ರಾರಂಭಿಸದೆ, ತಟಸ್ಥರಾಗಿ ದಿಗ್ಭ್ರಮೆಯಿಂದ ಪ್ರೇಕ್ಷಕರಾಗಿರಬೇಕಾಯಿತು - ಒಂದು ಒಂದೂವರೆ ತಾಸುಗಳ ಕಾಲ !

## ೨) ಗೀತೆಯಾದ ಮೇಲೆ ಮೂರು ಘಟನೆಗಳಾದ ಮೇಲೆ ಯುದ್ಧಾರಂಭ :

ಭಗವದ್ಗೀತೆಯು ಶ್ರೀಮನ್ಮಹಾಭಾರತದ ಆರನೆಯ ಪರ್ವವಾದ ಭೀಷ್ಮಪರ್ವದ ೨೫ ನೆಯ ಅಧ್ಯಾಯದಿಂದ ೪೨ ನೆಯ ಅಧ್ಯಾಯ ಪೂರ್ತಿ ಪ್ರಸರಿಸಿರುವ ಶ್ರೀ ಕೋಶ. ಭಗವದ್ಗೀತೆಯು ಮುಗಿದ

ಮೇಲೆ, ೪೩ ನೆಯ ಅಧ್ಯಾಯ. ಅದರಲ್ಲಿ ಎರಡು ಘಟನೆಗಳು ನಡೆಯುತ್ತವೆ. ಆಗಲೂ ಇನ್ನೂ ಮಹಾಭಾರತ ಯುದ್ಧದ ಮೊದಲದಿನದ ಹೋರಾಟಕ್ಕೆ ಪ್ರಹಾರ ರೂಪದ ನಾಂದಿಯಾಗಿರುವುದಿಲ್ಲ. ಒಂದನೇ ಘಟನೆ - ಧರ್ಮರಾಜನು ವಿನೀತ ವೇಷದಲ್ಲಿ ಕಾಲ್ನಡಿಗೆಯಲ್ಲಿ ಮೌನವಾಗಿ ಸರಸರನೆ ಹೋಗಿ ಶತ್ರುಸೇನೆಯಲ್ಲಿ (ನಿರಾಯುಧನಾಗಿ) ಪ್ರವೇಶಿಸಿ, ಭೀಷ್ಮ-ದ್ರೋಣ-ಕೃಪ-ಶಲ್ಯರನ್ನು ಸರದಿಯ ಮೇರೆಗೆ ನಮಸ್ಕರಿಸಿ, ಅವರುಗಳೊಡನೆ ಯುದ್ಧಮಾಡಲು ಅನುಮತಿ ಪಡೆದು, ಅವರುಗಳು ಪ್ರತಿಯೊಬ್ಬರಿಂದ 'ವಿಜಯೀಭವ' ಎಂಬ ಆಶೀರ್ವಾದವನ್ನೂ ಗಳಿಸಿ, ತನ್ನ ಸೇನೆಗೆ ಬಂದು, ಕವಚ ಬಿಲ್ಲು ಬಾಣ ಮುಂತಾದುವನ್ನು ಧರಿಸಿ, ಸನ್ನದ್ಧನಾಗುತ್ತಾನೆ ॥ ಎರಡನೆಯ ಘಟನೆ - ಧರ್ಮರಾಜನು ಎರಡು ಸೇನೆಗಳ ಮಧ್ಯೆ ತನ್ನ ರಥದಲ್ಲಿ ಎದುರಾಳಿಗಳಿಗೆ ಅಭಿಮುಖವಾಗಿ ನಿಂತು 'ನನ್ನ ಪಕ್ಷಕ್ಕೆ ಯಾರೇ ಆದರೂ ಬಂದು ಸೇರಿಕೊಂಡು ಯುದ್ಧಮಾಡಿ ನನಗೆ ಸಹಾಯ ಮಾಡುವವರಿದ್ದರೆ, ಬರಬಹುದು. ಆದರದಿಂದ ಸ್ವಾಗತಿಸುತ್ತೇನೆ' ಎಂದು ಘೋಷಣೆ ಮಾಡುತ್ತಾನೆ. ಇದನ್ನು ಕೇಳಿ 'ಯುಯುತ್ಸು' ಎಂಬ ಧೃತರಾಷ್ಟ್ರ ಪುತ್ರನೊಬ್ಬನು (ಗಾಂಧಾರೀ ಪುತ್ರನಲ್ಲ, ಒಬ್ಬ ವೈಶ್ಯಸ್ತ್ರೀಸಂಜಾತನಾದ ಧೃತರಾಷ್ಟ್ರಪುತ್ರ ಅವನು) ಧರ್ಮರಾಜನ ಬಳಗಕ್ಕೆ ಬಂದು ಸೇರುತ್ತಾನೆ - ಧಾರ್ತರಾಷ್ಟ್ರರು ನೂರು ಮಂದಿಯ ಮೇಲೆ ಯುದ್ಧಮಾಡಲು.

೪೪ನೆಯ ಅಧ್ಯಾಯದಲ್ಲಿ ಮೂರನೆಯ ಘಟನೆ ನಡೆಯುತ್ತದೆ ಅದೇನೆಂದರೆ ಭೀಮಸೇನನು, ಪಾಂಡವರ ವಜ್ರವ್ಯೂಹದ ಮುಂಭಾಗದಲ್ಲಿ ನಿಂತಿದ್ದವನು, ಗೂಳಿಯಂತೆ ಗುಟುರು ಹಾಕುತ್ತಾನೆ. ಅದಕ್ಕೆ ಶತ್ರು ಸೇನೆಯವರೆಲ್ಲ ನಡುಗುತ್ತಾರೆ. ಅನಂತರ ವೀರನಾದ ಸಿಂಹನಾದಗಳನ್ನು ಮಾಡುತ್ತಾನೆ. ಆಗ

ಸೇನೆಯಲ್ಲಿರುವ ಗಜ ತುರಗಗಳೆಲ್ಲವೂ ಬೆಚ್ಚಿ ರಣರಂಗದ ನೆಲವನ್ನೆಲ್ಲ ಒದ್ದೆಮಾಡಿಬಿಡುತ್ತವೆ. ದುರ್ಯೋಧನಾದಿ ನೂರು ಮಂದಿ ಸೋದರರೂ ತಮ್ಮ ಮೇಲೇ, ಭೀಮಸೇನ ಏರಿ ಬರುತ್ತಿದ್ದಾನೆ ಎಂದು ಗಾಬರಿಗೊಂಡು ಎಲ್ಲರೂ ಒಟ್ಟಿಗೆ ಅವನೊಬ್ಬನ ಮೇಲೆಯೇ ಶಸ್ತ್ರ ಪ್ರಯೋಗ ಮಾಡಲು ಪ್ರಯತ್ನಿಸುತ್ತಾರೆ. ಕೂಡಲೇ ಎರಡೂ ಸೇನೆಗಳ ವೀರರಿಗೆ ಹೋರಾಟ ಶುರುವಾಗಿ ಯುದ್ಧ ಕೋಲಾಹಲ ಪ್ರಾರಂಭವಾಗಿಬಿಡುತ್ತದೆ. ಇದೇ ನಿಜವಾದ ಯುದ್ಧಾರಂಭ. ಗೀತೆಯಾದ ಮೇಲೆ ಹೀಗೆ ಮೂರು ಘಟನೆಗಳು ನಡೆದ ಮೇಲೆ ಧಾರ್ತರಾಷ್ಟ್ರರ ಕಡೆಯಿಂದಲೇ ಪ್ರಹಾರ ಪ್ರಾರಂಭವಾಗುವುದು. ಗೀತೋಪದೇಶ ಕಾಲದಲ್ಲಿ ಶಸ್ತ್ರ ಪ್ರಹಾರ ಪ್ರಸಂಗ ಇಲ್ಲವೇ ಇಲ್ಲ ಎಂದು ಬೇರೆ ಹೇಳಬೇಕೆ ?

**ಇ) ಗೀತೋಪದೇಶ ಕಾಲದಲ್ಲಿ ಅರ್ಜುನನು 'ಶಿಷ್ಯ'ನಾಗಿ 'ಪ್ರಪನ್ನ'ನಾಗಿ ಎಂದರೆ ಶರಣಾಗತನಾಗಿ ಕುಳಿತಿದ್ದನಾದ್ದರಿಂದ 'ರಥೋಪಸ್ಥದಲ್ಲೇ', ಎಂದರೆ ರಥದ ಮಡಿಲಲ್ಲೇ, ಶ್ರೀಗೀತಾಚಾರ್ಯನ ಪಾದ ತಳದಲ್ಲೇ ಕೈಮುಗಿದು ಕುಳಿತಿದ್ದನೇ ಹೊರತು, ಬೆನ್ನಹಿಂದೆಯೂ ಅಲ್ಲ, ರಥ ಬಿಟ್ಟು ಕೆಳಗಿಳಿದೂ ಇರಲಿಲ್ಲ.**

**ಈ) ಶ್ರೀಕೃಷ್ಣನು ಯಾವಾಗಲೂ ಚತುರ್ಭುಜನಾಗಿಯೇ ಇದ್ದದ್ದು.**

ವಿಶ್ವರೂಪವನ್ನು ಭಾಗ್ಯಶಾಲಿಯಾದ ಅರ್ಜುನನು ನೋಡಿದ ಮೇಲೆ ಕೊನೆಯಲ್ಲಿ ಪ್ರಾರ್ಥಿಸುತ್ತಾನೆ 'ಸಹಸ್ರಬಾಹುವಾದ ವಿಶ್ವಮೂರ್ತಿಯೇ ! ನಿನ್ನನ್ನು ಮೊದಲಿನಂತೆಯೇ ಚತುರ್ಭುಜರೂಪಿಯಾಗಿ ನೋಡಲಿಚ್ಛಿಸುತ್ತೇನೆ (ತೇನೈವ ರೂಪೇಣ ಚತುರ್ಭುಜೇನ ಸಹಸ್ರಬಾಹೋ!

ಭವ ವಿಶ್ವಮೂರ್ತೇ ।) ಆದ್ದರಿಂದ ಶ್ರೀಕೃಷ್ಣರೂಪದಲ್ಲಿ ಶ್ರೀ ಭಗವಂತನು ಸುಂದರ ಚತುರ್ಭುಜ ಧಾರಿಯಾಗಿಯೇ ಇದ್ದದ್ದು, ಹಾಗೆಯೇ, ಸಾರಥಿಯಾದಾಗಲೂ ಆಚಾರ್ಯನಾದಾಗಲೂ ಮತ್ತು ಯಾವಾಗಲೂ ಹುಟ್ಟಿದ್ದೇ ಚತುರ್ಬಾಹುವಾಗಿ, ಕಿರೀಟಕುಂಡಲಪೀತಾಂಬರ ಕಟಿಸೂತ್ರಾದಿ ಸರ್ವಾಲಂಕಾರ ಭೂಷಿತನಾಗಿ! ಆದರೆ ತಾಯಿಯ ಮಾತಿಗಾಗಿ ತಾನು ದೇವರೆಂದು ಕಾಣುವ ಆಕಾರವನ್ನು ಮರೆಸಿಕೊಂಡು ಪ್ರಾಕೃತ ಮಾನುಷ ಶಿಶುವಿನಂತಾದ ! ತಾಯಿ ಹಾಗೆ ಹೇಳಿದ್ದು ಕಂಸ ಭಯದಿಂದ ! ಕಂಸವಧಪರ್ಯಂತವಾಗಿ ಹೀಗೆ ಮಾತೃವಾಕ್ಯಪರಿಪಾಲನೆ ಸಾರ್ಥಕವಾಗಿ ನಡೆಯಿತು. ತದನಂತರ ಕಂಸಭಯ ದೇವಕಿಗೆ ಇನ್ನಿಲ್ಲವಾದ್ದರಿಂದ, ಅಂದಿನಿಂದಲೇ ತನ್ನ ಸಹಜ ಚತುರ್ಭುಜ ಶಂಖ ಚಕ್ರಗದಾಧಾರಿತ್ವ ಬಂದು ಬಿಟ್ಟಿತು ಶ್ರೀ ಕೃಷ್ಣನಿಗೆ. ಇದು ಅರ್ಜುನನಿಗೆ ಚಿರಪರಿಚಿತವಾದ ಸುಂದರ ರೂಪ ಶ್ರೀ ಕೃಷ್ಣನದು. ಯುದ್ಧಕ್ಕೆ ಅರ್ಜುನನ ಪ್ರಾರ್ಥನೆಯ ಮೇರೆಗೆ ಸಾರಥಿಯಾಗಿ ಬಂದಾಗಲೂ, ಆ ಸುಂದರ ಚತುರ್ ಬಾಹುತ್ವ ಹಾಗೇ ಇತ್ತು. ಆದರೆ 'ಆಯುಧ ಹಿಡಿಯುವುದಿಲ್ಲ' ಎಂದು ಪ್ರತಿಜ್ಞೆ ಮಾಡಿ ಅವುಗಳನ್ನು ಮರೆಸಿಕೊಂಡಿದ್ದ. ಆದರೆ ಆಯುಧ ದೇವತೆಗಳು ಮಾತ್ರ ಶ್ರೀ ಕೃಷ್ಣನನ್ನು ಬಿಟ್ಟು ಅಗಲದೆ ಇರುವುದನ್ನು ಅರ್ಜುನನಂತಹ ಭಕ್ತನು ಕಾಣುತ್ತಿದ್ದನೆನ್ನಬಹುದು ! ಏಕೆಂದರೆ 'ಕಿರೀಟಿನಂ ಗದಿನಂ ಚಕ್ರಹಸ್ತಮ್ ಇಚ್ಛಾಮಿತ್ವಾಂದ್ರಷ್ಟು ಮಹಂ ತಥೈವ । ತೇನೈವ ರೂಪೇಣ ಚತುರ್ಭುಜೇನ....' ಎಂದು ಅರ್ಜುನನು ಬೇಡಿಕೊಳ್ಳುವುದು ಕಂಡುಬರುತ್ತದೆ.

ಕೃಷ್ಣಾಷ್ಟಕ ಸ್ತೋತ್ರದಲ್ಲಿ ''ಮಂದಾರ ಗಂಧ ಸಂಯುಕ್ತಂ ಚಾರುಹಾಸಂ ಚತುರ್‌ಭುಜಮ್'' ಎಂಬುದಾಗಿ ಶ್ರೀ ಕೃಷ್ಣನ ಚತುರ್ಭುಜತ್ವದ ವರ್ಣನೆಯಿದೆ.

ಶ್ರೀ ಭಾಗವತದಲ್ಲಿ ರುಕ್ಮಿಣಿಯ ಪ್ರೇಮ ಮತ್ತು ಪತಿಪ್ರಾಣಳಾಗಿರುವಿಕೆಯನ್ನು ಪರೀಕ್ಷಿಸಲು ಏಕಾಂತದಲ್ಲಿ ಶ್ರೀ ಕೃಷ್ಣ ಒಮ್ಮೆ ಅವಳ ಕೋಮಲವಾದ ಮನಸ್ಸಿಗೆ ಅಪ್ರಿಯವಾದ ಮಾತುಗಳನ್ನು ಮೆಲ್ಲನೆಯ ರೀತಿಯಲ್ಲೇ ಹೇಳಿ ಅಘಾತ ಮಾಡಿದಾಗ, ಆ ಪತಿಪರಾಯಣೆಯು ವಿಷಮಯವಾದ ವಾಗ್ಬಾಣಗಳಿಂದ ತಾಡಿತಳಾದಂತೆ ಕುಸಿದು ಕುಳಿತು ಮೂರ್ಛಿತಳಾಗುತ್ತಾಳೆ. ಆಗ ಶ್ರೀಕೃಷ್ಣ ಏನು ಮಾಡಿದನೆಂಬ ವರ್ಣನೆಯು ಹೀಗಿದೆ-

-'ಪರ್ಯಙ್ಕಾದ್ ಅವರುಹ್ಯಾಶುತಾ ಮುತ್ಥಾಪ್ಯ ಚತುರ್ಭುಜಃ ।
ಕೇಶಾನ್ ಸಮುಹ್ಯ ತದ್‌ವಕ್ತ್ರಂ ಪ್ರಾಮೃಜತ್ ಪದ್ಮಪಾಣಿನಾ' ॥ (10-60-26)

=ಮಂಚದಿಂದ ಕೆಳಗಿಳಿದು, ಬೇಗ ಆಕೆಯನ್ನು ಎತ್ತಿಕೊಂಡು, ಚತುರ್ಬಾಹುವು, ಆಕೆಯ ಹರಡಿದ್ದ ಕೇಶ ಪಾಶಗಳನ್ನೊಟ್ಟುಗೂಡಿಸಿ, ಆಕೆಯ ಮುಖಪದ್ಮವನ್ನು, ತನ್ನ ಕರಕಮಲದಿಂದ ಮೃದುವಾಗಿ ನೇವರಿಸಿದನು .

ಹೀಗೆ ಶ್ರೀ ಕೃಷ್ಣನು ಸಾಮಾನ್ಯವಾಗಿ ಮಾನುಷ ರೂಪದಲ್ಲಿದ್ದಾಗಲೆಲ್ಲ ಚತುರ್ಭುಜಧಾರಿಯೇ ಆಗಿದ್ದನೆಂದೂ, ವಿಶ್ವರೂಪದಲ್ಲಿ ಮಾತ್ರವೇ ಸಹಸ್ರಬಾಹುವಾದನೆಂದೂ, ಕಂಸವಧಕ್ಕೆ ಮುಂಚೆಯಷ್ಟೇ ತಾಯಿಗೋಸ್ಕರ ಎರಡು ಕೈಮರೆಸಿಕೊಂಡಿದ್ದನೆಂದೂ, ತಿಳಿದು ಬರುತ್ತದೆ.

## ೫) ಗೀತಾರ್ಥವು ಹೇಳಲ್ಪಟ್ಟದ್ದು ಅರ್ಜುನನಿಗೆ ಮೊದಲಲ್ಲ.

ಗೀತೆಯಲ್ಲಿರುವ ಕರ್ಮಯೋಗವನ್ನು ಮನ್ವಂತರದಾದಿಕಾಲದಲ್ಲಿ ಸೂರ್ಯದೇವನಿಗೆ ಶ್ರೀ

ಭಗವಂತನು ತಾನೇ ಹೇಳಿದ್ದನೆಂದು. ಗೀತೆಯಿಂದಲೇ ತಿಳಿದು ಬರುತ್ತದೆ. (ನಾಲ್ಕನೇ ಅಧ್ಯಾಯ ಮೊದಲನೆಯ ಶ್ಲೋಕ). ಗೀತೆಯಲ್ಲಿರುವ ಅನನ್ಯಭಕ್ತಿ ಪ್ರಧಾನವಾದ ಸಾತ್ವತಧರ್ಮವೆಂಬ ಮಾರ್ಗವು, ಅನೇಕ ಬ್ರಹ್ಮದೇವರುಗಳಿಗೆ ಶ್ರೀ ಭಗವಂತನಿಂದಲೇ ಆಯಾ ಕಾಲದಲ್ಲಿ ಹೇಳಲ್ಪಡುತ್ತಾ, ಅಥವಾ ಹೇಳಿಸಲ್ಪಡುತ್ತಾ, ಬಂದಿರುವ ಚರಿತ್ರೆಯಿದೆ, ಎಂಬುದಾಗಿ ಶ್ರೀಮನ್ಮಹಾಭಾರತದಲ್ಲಿ ಹೇಳಲಾಗಿದೆ. (ಇದರ ವಿಸ್ತೃತ ವರದಿಯನ್ನು ವಿಸ್ತೃತ ವ್ಯಾಖ್ಯಾನವಾದ 'ಲೋಕಹಿತೈಷಿಣೀ ಚಂದ್ರಿಕಾವಿಹಾರದಲ್ಲಿ ನಾಲ್ಕನೇ ಅಧ್ಯಾಯದ ಆರಂಭದಲ್ಲಿ ಕಾಣಬಹುದು).



Funding: Tattva Heritage Foundation,Kolkata. Digitization: eGangotri.

॥ ಶ್ರೀಃ ॥

ಶ್ರೀಮತೇ ರಾಮಾನುಜಾಯ ನಮಃ

ಲೋಕಹಿತೈಷಿಣೀ ವ್ಯಾಖ್ಯಾಸಮೇತಾ

# ದಿವ್ಯವಾತ್ಸಲಾಮೃತವಾಹಿನೀ

## (ಶ್ರೀ ಭಗವದ್ಗೀತಾ)

## ಪ್ರಥಮಾಧ್ಯಾಯಃ (ಬೀಷ್ಮಪರ್ವದ ೨೫ ನೇ ಅಧ್ಯಾಯ)

ಧೃತರಾಷ್ಟ್ರ ಉವಾಚ — ಧೃತರಾಷ್ಟ್ರನು ಹೇಳಿದನು

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಣ್ಡವಾಶ್ಚೈವ ಕಿಮಕುರ್ವತ ಸಞ್ಜಯ ॥೧॥**

ಧರ್ಮಕ್ಷೇತ್ರೇ ಕುರುಕ್ಷೇತ್ರೇ — ಧರ್ಮದ ನೆಲವಾದ ಕುರುಕ್ಷೇತ್ರದಲ್ಲಿ
ಸಮವೇತಾಃ ಯುಯುತ್ಸವಃ — ಒಟ್ಟಿಗೆ ಸೇರಿ ಯುದ್ಧಸನ್ನದ್ಧರಾಗಿದ್ದ
ಮಾಮಕಾಃ ಪಾಣ್ಡವಾಃ ಚಏವ — ನನ್ನವರೂ ಪಾಂಡವಪಕ್ಷದವರೂ ಕೂಡ
ಕಿಮ್ ಅಕುರ್ವತ ಸಞ್ಜಯ? — ಏನು ಮಾಡಿದರು, ಸಂಜಯನೇ?

ಸಞ್ಜಯ ಉವಾಚ | ಸಂಜಯನು ಹೇಳಿದನು

**ದೃಷ್ಟ್ವಾತು ಪಾಣ್ಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥**

| | |
|---|---|
| ತದಾ, ರಾಜಾ ದುರ್ಯೋಧನಃ | ಹಾಗೆ ಎಲ್ಲರೂ ಸೇರಿದ್ದಾಗ, 'ರಾಜ' ದುರ್ಯೋಧನನು |
| ಪಾಣ್ಡವಾನೀಕಂ ವ್ಯೂಢಂ ದೃಷ್ಟ್ವಾತು | ಪಾಂಡವನಸೇನೆ ವ್ಯೂಹಗಟ್ಟಿ ನಿಂತಿರುವುದನ್ನು ನೋಡಿದಕೂಡಲೆ |
| ಆಚಾರ್ಯಮ್ ಉಪ-ಸಂಗಮ್ಯ | ಆಚಾರ್ಯ ದ್ರೋಣರ ಬಳಿಸಾರಿ |
| ವಚನಮ್ ಅಬ್ರವೀತ್ | ಮಾತೊಂದನ್ನು ಸ್ಪಷ್ಟೀಕರಿಸಿ ಹೇಳಿದನು |

**ಪಶ್ಯೈತಾಮ್ ಪಾಣ್ಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥**

| | |
|---|---|
| ಆಚಾರ್ಯ ! ಪಶ್ಯ ! | ಗುರುವರ್ಯ ! ನೋಡಿರಿ ! |
| ಪಾಣ್ಡುಪುತ್ರಾಣಾಮ್ ಏತಾಂ | ಪಾಂಡವರ ಈ |
| ಮಹತೀಂ ಚಮೂಮ್ ! | ಅತಿದೊಡ್ಡ ಸೈನ್ಯವನ್ನು ! |
| ತವ ಧೀಮತಾ ಶಿಷ್ಯೇಣ | ನಿಮ್ಮ ಧೀಮಂತ ಶಿಷ್ಯನಿಂದ, |
| ದ್ರುಪದ ಪುತ್ರೇಣ, | ದ್ರುಪದನ ಮಗನಿಂದ, |
| ವ್ಯೂಢಾಮ್ ॥ | ವ್ಯೂಹರೂಪದಲ್ಲಿ ರಚಿತವಾಗಿರುವುದನ್ನು ! |

**ಅತ್ರ ಶೂರಾ ಮಹೇಷ್ವಾಸಾಃ ಭೀಮಾರ್ಜುನಸಮಾ ಯುಧಿ**
**ಯುಯುಧಾನೋವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥**

| | |
|---|---|
| ಅತ್ರ, ಶೂರಾಃ, ಮಹೇಷ್ವಾಸಾಃ | ಇದರಲ್ಲಿ, ಶೂರರೂ, ಮಹಾಧನುರ್ಧಾರಿಗಳೂ, |
| ಯುಧಿ ಭೀಮಾರ್ಜುನಸಮಾಃ | ಯುದ್ಧದಲ್ಲಿ (೧) ಭೀಮನಿಗೂ (೨) ಅರ್ಜುನನಿಗೂ ಸಮಾನರೂ ಆಗಿರುವಂತಹ |
| ಯುಯುಧಾನಃ ವಿರಾಟಃಚ | (೩) ಯುಯುಧಾನನೂ (೪) ವಿರಾಟನೂ |
| ದ್ರುಪದಃಚ ಮಹಾರಥಃ | (೫) ದೊಡ್ಡರಥವುಳ್ಳ ದ್ರುಪದನೂ |

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಙ್ಗಃ ॥೫॥**
**ಯುಧಾಮನ್ಯುಶ್ಚ ವಿಕ್ರಾನ್ತಃ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥**

(೬) ಧೃಷ್ಟಕೇತುವೂ (೭) ಚೇಕಿತಾನನೂ (೮) ವೀರನಾದ ಕಾಶಿರಾಜನೂ (೯) ಪುರುಜಿತ್ (೧೦) ಮತ್ತು ಕುಂತಿಭೋಜರೂ (೧೧) ನರಶ್ರೇಷ್ಠನಾದ ಶೈಬ್ಯನೂ (೧೨) ವಿಕ್ರಮ ಶಾಲಿಯಾದ ಯುಧಾಮನ್ಯುವೂ (೧೩) ವೀರವರನಾದ ಉತ್ತಮೌಜನೂ ಮತ್ತು (೧೪) ಅಭಿಮನ್ಯುವೂ (೧೫-೧೯) ದ್ರೌಪದೀ ಪುತ್ರರೈವರೂ (ಇದ್ದಾರೆ) ।

ಸರ್ವೇಏವ ಮಹಾರಥಾಃ= ಎಲ್ಲರೂ ಮಹಾರಥರೇ । ಇತರ ಎಲ್ಲ ಮಹಾರಥರೂ ಕೂಡ ಇದ್ದಾರೆ ॥

**ಅಸ್ಮಾಕಂತು ವಿಶಿಷ್ಟಾಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ, ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥೭॥**

| | |
|---|---|
| ಅಸ್ಮಾಕಂತು, ಯೇವಿಶಿಷ್ಟಾಃ | ನಮ್ಮವರಾದರೋ, ಯಾರು ಗಣ್ಯರು |
| ತಾನ್ ನಿಬೋಧ, ದ್ವಿಜೋತ್ತಮ! | ಅವರನ್ನು ನಿಖರವಾಗಿ ತಿಳಿಯಿರಿ, ವಿಪ್ರವರ್ಯರೇ! |
| ಮಮ ಸೈನ್ಯಸ್ಯನಾಯಕಾಃ (ಯೇ) | ನನ್ನ ಸೈನ್ಯದ ನಾಯಕರುಗಳು ಯಾರೋ |
| ತಾನ್ ತೇ ಸಂಜ್ಞಾರ್ಥಂ ಬ್ರವೀಮಿ | ಅವರುಗಳನ್ನು ನಿಮ್ಮ ಗಮನಕ್ಕೆ ತರುವುದಕ್ಕಾಗಿ ಸ್ಪಷ್ಟವಾಗಿ ಹೇಳುತ್ತೇನೆ ॥ |

**ಭವಾನ್, ಭೀಷ್ಮಶ್ಚ ಕರ್ಣಶ್ಚ, ಕೃಪಶ್ಚ ಸಮಿತಿಂಜಯಃ, ।**
**ಅಶ್ವತ್ಥಾಮಾ, ವಿಕರ್ಣಶ್ಚ, ಸೌಮದತ್ತಿಸ್ತಥೈವ ಚ ॥೮॥**

(೧)ತಾವು, (೨) ಭೀಷ್ಮರೂ, (೩) ಕರ್ಣನೂ, (೪) ಸಮರವಿಜಯಿಯಾದ ಕೃಪಾಚಾರ್ಯರೂ
(೫) ಅಶ್ವತ್ಥಾಮನೂ (೬) ವಿಕರ್ಣನೂ (೭) ಭೂರಿಶ್ರವಸನೂ, ಹಾಗೆಯೇ

**ಅನ್ಯೇ ಚ ಬಹವಃ ಶೂರಾಃ ಮದರ್ಥೇ ತ್ಯಕ್ತ ಜೀವಿತಾಃ**
**ನಾನಾಶಸ್ತ್ರ ಪ್ರಹರಣಾಃ ಸರ್ವೇ ಯುದ್ಧ ವಿಶಾರದಾಃ ॥೯॥**

| | |
|---|---|
| ಅನ್ಯೇ ಬಹವಃ ಶೂರಾಃ ಚ | ಇನ್ನೂ ಅನೇಕ ಶೂರರೂ ಕೂಡ (ಇದ್ದಾರೆ) |
| ಸರ್ವೇ, ಮದರ್ಥ್ಯೇ ತ್ಯಕ್ತ ಜೀವಿತಾಃ | ಎಲ್ಲರೂ ನನಗಾಗಿ ಪ್ರಾಣ ಒತ್ತೆ ಇಟ್ಟರುವವರೇ ! |
| ನಾನಾಶಸ್ತ್ರ ಪ್ರಹರಣಾಃ | ಬಹುವಿಧ ಶಸ್ತ್ರ ಆಯುಧಗಳುಳ್ಳವರು |
| ಯುದ್ಧ ವಿಶಾರದಾಃ | ಯುದ್ಧ ನಿಪುಣರು ।೯॥ |

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥**

| | |
|---|---|
| ತತ್, ಭೀಷ್ಮಾಭಿರಕ್ಷಿತಂ | ಆದ್ದರಿಂದ, ಭೀಷ್ಮರಿಂದ ರಕ್ಷಿತವಾದ |
| ಅಸ್ಮಾಂಕಬಲಮ್ ಅಪರ್ಯಾಪ್ತಂ । | ನಮ್ಮ ಸೇನಾಬಲವು ಸಾಲದು |
| ಭೀಮಾಭಿರಕ್ಷಿತಂ ಏತೇಷಾಂ | ಭೀಮನಿಂದ ರಕ್ಷಿತವಾದ ಇವರ |
| ಇದಂ ಬಲಂ ತು ಪರ್ಯಾಪ್ತಂ । | ಈ ಸೇನಾಬಲವಾದರೋ ಸಾಕಷ್ಟಿದೆ !॥ |

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ**
**ಭೀಷ್ಮಮೇವಾಭಿರಕ್ಷನ್ತು ಭವನ್ತಸ್ಸರ್ವ ಏವಹಿ ॥೧೧॥**

| | |
|---|---|
| (ಆದ್ದರಿಂದಲೇ) ಭವನ್ತಃ ಸರ್ವೇಏವ | ನೀವುಗಳು ಎಲ್ಲರೂ ಸೇರಿ |
| ಸರ್ವೇಷು ಅಯನೇಷು ಚ | ಎಲ್ಲ ಮಾರ್ಗಗಳಲ್ಲೂ ಕೂಡ |
| ಯಥಾಭಾಗಮ್ ಅವಸ್ಥಿತಾಃ | ಸ್ವಸ್ಥಾನಗಳನ್ನು ಬಿಡದೆ ನಿಂತವರಾಗಿ |
| ಭೀಷ್ಮಮ್ ಏವ ಅಭಿರಕ್ಷನ್ತು, ಹಿ! | ಭೀಷ್ಮರನ್ನೇ ಸುತ್ತಲೂ ರಕ್ಷಿಸಿರಿ, ಎಚ್ಚರಿಕೆ! ॥೧೧॥ |

## (ಧಾರ್ತರಾಷ್ಟ್ರರ ರಣ ಘೋಷ)

**ತಸ್ಯ ಸಂಜಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಙ್ಖಂದಧ್ಮೌ ಪ್ರತಾಪವಾನ್ ॥೧೨॥**

| | |
|---|---|
| ತಸ್ಯ, ಹರ್ಷಂ | ಹಾಗೆ ವಿಷಣ್ಣನಾಗಿದ್ದ ಅವನಿಗೆ, ಹರ್ಷವನ್ನು |
| ಸಂಜಯನಯನ್, ಕುರುವೃದ್ಧಃ, | ಉಂಟು ಮಾಡುವುದಕ್ಕಾಗಿ, ಕುರುಕುಲದ ಹಿರಿಯ |
| ಪ್ರತಾಪವಾನ್, ಪಿತಾಮಹಃ, | ರಾದ, ಪ್ರತಾಪಶಾಲಿಯಾದ ಭೀಷ್ಮರು, |
| ಸಿಂಹನಾದಮ್ ವಿನದ್ಯ, | ಸಿಂಹಗರ್ಜನೆಯನ್ನು ವಿಶೇಷ ರೀತಿಯಲ್ಲಿ |
| ಉಚ್ಚೈಃ ಶಂಖಂದಧ್ಮೌ ॥ | ಮಾಡಿ, ಜೋರಾಗಿ ಶಂಖ ಊದಿದರು ॥೧೨॥ |

Funding: Tattva Heritage Foundation,Kolkata. Digitization: eGangotri.

**ತತಃ ಶಙ್ಖಾಶ್ಚ ಭೇರ್ಯಶ್ಚ ಪಣವಾನಕ ಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸಶಬ್ದಸ್ತುಮುಲೋಽಭವತ್ ॥೧೩॥**

ತತಃ ಶಂಖಾಶ್ಚ ಭೇರ್ಯಶ್ಚ — ಆದರಿಂದಾಗಿ ಶಂಖಗಳೂ, ಭೇರಿಗಳೂ,
ಪಣವ-ಆನಕ-ಗೋಮುಖಾಃ — ಪಣವ-ನಗಾರಿ-ಗೋಮುಖವಾದ್ಯಗಳೂ,
ಸಹಸಾ ಏವ ಅಭ್ಯಹನ್ಯನ್ತ । — ಇದ್ದಕ್ಕಿದ್ದಂತೆಯೇ ಜೋರಾಗಿ ಬಾರಿಸಲ್ಪಟ್ಟವು ।
ಸಃ ಶಬ್ದಃ ತುಮುಲಃ ಅಭವತ್ । ಆ ಶಬ್ದವು ದೊಡ್ಡಗದ್ದಲವಾಯಿತು ।೧೩॥

## (ಪಾಂಡವರ ರಣ ಘೋಷ)

**ತತಃ ಶ್ವೇತೈರ್ ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಂ ಪಾಣ್ಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**

ತತಃ ಶ್ವೇತೈರ್ ಹಯೈಃ — ಆದರಿಂದಾಗಿ, ಬಿಳುಪಾದ ಅಶ್ವಗಳಿಂದ
ಯುಕ್ತೇ, ಮಹತಿ, — ಕೂಡಿರುವಂತಹ, ಮಹತ್ವ ಪೂರ್ಣವಾದಂತಹ
ಸ್ಯನ್ದನೇ ಸ್ಥಿತೌ, — ರಥದಲ್ಲಿ ಉಪವಿಷ್ಟರಾಗಿದ್ದ,
ಮಾಧವಃಪಾಣ್ಡವಃ ಚಏವ, — ಶ್ರಿಯಃ ಪತಿಯೂ ಪಾಂಡುಪುತ್ರನೂ ಕೂಡಿಯೇ,
ದಿವ್ಯೌ ಶಂಖೌಪ್ರದಧ್ಮತುಃ — ಸರ್ವೋತ್ಕೃಷ್ಟವಾದ ಶಂಖಗಳನ್ನು ಅದ್ಭುತವಾಗಿ ಊದಿದರು ।೧೪॥

**ಪಾಞ್ಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಣ್ಡ್ರಂ ದಧ್ಮೌ ಮಹಾಶಙ್ಖಂ ಭೀಮಕರ್ಮಾ ವೃಕೋದರಃ ॥**

| | |
|---|---|
| ಹೃಷೀಕೇಶಃ ಪಾಂಚಜನ್ಯಂ ದಧ್ಮೌ । | ಹೃಷೀಕೇಶನು 'ಪಾಂಚಜನ್ಯ'ವನ್ನು ಊದಿದನು |
| ಧನಂಜಯಃ ದೇವದತ್ತಮ್ । | ಅರ್ಜುನನು 'ದೇವದತ್ತವ'ನ್ನು । ಭಯಂಕರ |
| ಭೀಮಕರ್ಮಾ ವೃಕೋದರಃ | ಕರ್ಮ ಮಾಡುವ ಭೀಮಸೇನನು |
| ಮಹಾಶಂಖಂ ಪೌಂಡ್ರಂ | ಅತಿದೊಡ್ಡ ಶಂಖವಾದ 'ಪೌಂಡ'ವನ್ನೂ ಊದಿದನು ॥೧೫॥ |

**ಅನನ್ತವಿಜಯಂ ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥**

| | |
|---|---|
| ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ | ರಾಜನಾದ ಕುಂತೀಸುತ ಧರ್ಮರಾಜನು |
| ಅನನ್ತ ವಿಜಯಮ್ । | 'ಅನನ್ತ ವಿಜಯ'ವೆಂಬ ಶಂಖ ಊದಿದನು । |
| ನಕುಲಃ ಸಹದೇವಃಚ | ನಕುಲನೂ ಸಹದೇವನೂ ಕೂಡ |
| ಸುಘೋಷಮಣಿ - ಪುಷ್ಪಕೌ ॥ | 'ಸುಘೋಷಮಣಿ' 'ಪುಷ್ಪಕ' ಎಂಬ ಶಂಖಗಳನ್ನೂದಿದರು ॥೧೬॥ |

**ಕಾಶ್ಯಶ್ಚ ಪರಮೇಷ್ವಾಸಃ ಶಿಖಣ್ಡೀಚ ಮಹಾರಥಃ**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥**

| | |
|---|---|
| ಪರಮ-ಇಷ್ವಾಸಃ ಕಾಶ್ಯಃಚ | ಪರಮ ಧನುರ್ಧಾರಿಯಾದ ಕಾಶಿರಾಜನೂ |
| ಮಹಾರಥಃ ಶಿಖಣ್ಡೀ | ದೊಡ್ಡ ರಥವುಳ್ಳ ಶಿಖಂಡಿಯೂ |
| ಧೃಷ್ಟದ್ಯುಮ್ನಃ, ವಿರಾಟಃಚ | ಧೃಷ್ಟದ್ಯುಮ್ನನೂ, ಮತ್ತು ವಿರಾಟರಾಜನೂ |
| ಅಪರಾಜಿತಃ ಸಾತ್ಯಕಿಃಚ। | ಸೋಲನ್ನರಿಯದ ಸಾತ್ಯಕಿಯೂ |

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಙ್ಖಾನ್ ದಧ್ಮುಃ ಪೃಥಕ್ ಪೃಥಕ್ ॥೧೮॥**

| | |
|---|---|
| ದ್ರುಪದಃ, ದ್ರೌಪದೇಯಾಃಚ, | ದ್ರುಪದನೂ ದ್ರೌಪದಿಯ ಪುತ್ರರೂ |
| ಮಹಾಬಾಹುಃ ಸೌಭದ್ರಃ ಚ | ಮಹಾಬಾಹುಬಲಿಯಾದ ಅಭಿಮನ್ಯುವೂ |
| ಸರ್ವಶಃ | ಹೀಗೆ ಎಲ್ಲ ಕಡೆಯಿಂದ ಎಲ್ಲ ವೀರರೂ |
| ಶಙ್ಖಾನ್ ಪೃಥಕ್ ಪೃಥಕ್, | ಶಂಖಗಳನ್ನು ಬೇರೆ ಬೇರೆಯಾಗಿ' |
| ದಧ್ಮುಃ, ಪೃಥಿವೀಪತೇ! | (ಒಂದಾದ ಮೇಲೊಂದು) ಊದುತ್ತಲೇ ಇದ್ದರು ಪೊಡವಿಯೊಡೆಯನೇ! |

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋಽಭ್ಯನುನಾದಯನ್ ॥೧೯॥**

| | |
|---|---|
| ಸಃಘೋಷಃ | ಅಂತಹ (ಮುಗಿಯದ) ಶಂಖಘೋಷವು |
| ತುಮುಲಃ, ನಭಃಚ ಪೃಥಿವೀಂಚ | ಭಯಂಕರವಾಗಿ, ಆಕಾಶವನ್ನೂ ಭೂಮಿಯನ್ನೂ |
| ಅನುನಾದಯನ್ ಅಪಿ | ಅನುರಣನಗೊಳಿಸುತ್ತಿದ್ದರೂ ಕೂಡ |
| ಧಾರ್ತರಾಷ್ಟ್ರಾಣಾಂ ಹೃದಯಾನಿ | ಧಾರ್ತರಾಷ್ಟ್ರರೆನಿಸಿಕೊಂಡ ನಿನ್ನವರ ಹೃದಯ |
| ಏವ, ವ್ಯದಾರಯತ್ | ಗಳನ್ನು ಮಾತ್ರ, ಸೀಳಿದಂತಾಯಿತು ! |

## (ಅರ್ಜುನನಿಗೊಂದು ವಿಚಿತ್ರ ಆಸೆ)

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ, ಧನುರುದ್ಯಮ್ಯ ಪಾಣ್ಡವಃ ॥**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ॥೨೦॥**

| | |
|---|---|
| ಅಥ, ಶಸ್ತ್ರ ಸಂಪಾತೇ ಪ್ರವೃತ್ತೇ | ಇನ್ನು, ಶಸ್ತ್ರ ಪ್ರಯೋಗವು ತೊಡಗ |
| ಕಪಿಧ್ವಜಃ | ಬೇಕಾಗಿರಲಾಗಿ, ಲಂಕಾದಹನ ಮಾಡಿದ |
| | ವಾನರನನ್ನು ಧ್ವಜದಲ್ಲಿ ಉಳ್ಳ ಅರ್ಜುನನು, |
| ಧಾರ್ತರಾಷ್ಟ್ರಾನ್ | ದಾರ್ತರಾಷ್ಟ್ರರೆಲ್ಲರೂ |

ವ್ಯವಸ್ಥಿತಾನ್ ದೃಷ್ಟ್ವಾ, ವ್ಯೂಹವ್ಯವಸ್ಥೆಯಲ್ಲಿರುವುದನ್ನು ಕಂಡು
ಧನುರ್ ಉದ್ಯಮ್ಯ, ತದಾ, ಬಿಲ್ಲನ್ನು ಹಿಡಿದೆತ್ತಿ (ಎದ್ದುನಿಂತು), ಆಗ,
ಹೃಷೀಕೇಶಂ ಇದಂ ವಾಕ್ಯಮ್ ಹೃಷೀಕೇಶನಿಗೆ ಈ ಮಾತನ್ನು
ಆಹ, ಮಹೀಪತೇ ! ಹೇಳಿದನು, ಭೂಪತಿಯೇ !

ಅರ್ಜುನ ಉವಾಚ ಅರ್ಜುನ ಹೇಳಿದನು

**ಸೇನಯೋರುಭಯೋರ್ ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ! ॥೨೧॥**

ಸೇನೆಗಳೆರಡರ ನಡುವೆ (ಮೇರಥಂ) ನನ್ನ ರಥವನ್ನು ನಿಲ್ಲಿಸು ಅಚ್ಯುತನೇ !
(ಸ್ಥಾಪಯ ಅಚ್ಯುತ!)

**ಯಾವದೇತಾನ್ ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥೨೨॥**

ರಣಸಮುದ್ಯಮೇ ಅಸ್ಮಿನ್ ಯುದ್ಧವೆಂಬ ಒಳ್ಳೆಯ ಉದ್ಯೋಗವಾದ
(ಕೈಃ), ಮಯಾಸಹ, ಯೋದ್ಧವ್ಯಂ ಇದರಲ್ಲಿ ಯಾರು, ನನ್ನ ಜೊತೆನಿಂತು, ಹೋರಾಡಬೇಕು
ಅಹಂ ಯೋದ್ಧುಕಾಮಾನ್ (ಎಂಬುದಾಗಿ) ನಾನು ಯುದ್ಧೇಚ್ಛೆಯಿಂದ ಬಂದು
ಉಪಸ್ಥಿತಾನ್, ಏತಾನ್, ನಿಂತಿರುವ, ಇವರುಗಳನ್ನು (ನಮ್ಮ ಸೇನೆಯಯವರನ್ನು)
ನಿರೀಕ್ಷೇ ಯಾವತ್ ಸರಿಯಾಗಿ ನೋಡುವೆನು ॥೨೨॥

ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇಃ ಯುದ್ಧೇ ಪ್ರಿಯಚಿಕೀರ್ಷವಃ ॥೨೩॥

| | |
|---|---|
| (ಹಾಗೆಯೇ) ದುರ್ಬುದ್ಧೇಃ . ಧಾರ್ತರಾಷ್ಟ್ರಸ್ಯ | ದುರ್ಬುದ್ಧಿಯಾದ ದುರ್ಯೋಧನನಿಗೆ |
| ಯುದ್ಧೇ ಪ್ರಿಯಚಿಕೀರ್ಷವಃ | ಯುದ್ಧದಲ್ಲಿ ಪ್ರಿಯವಾದುದನ್ನು ಮಾಡಲಿಚ್ಛಿಸಿ |
| ಅತ್ರಯೇ ಸಮಾಗತಾಃ | ಈ ಕುರುಕ್ಷೇತ್ರಕ್ಕೆ ಯಾರು ಬಂದು ಸೇರಿದ್ದಾರೆಯೋ |
| (ತಾನ್) ಯೋತ್ಸ್ಯಮಾನಾನ್ | (ಅಂತಹ) ನಮ್ಮಿಂದ ಹೊಡೆಯಲ್ಪಡುವವರನ್ನು |
| ಅಹಮ್ ಅವೇಕ್ಷೇ | ನಾನು ವೀಕ್ಷಿಸುತ್ತೇನೆ ॥೨೩॥ |

## ಪಾರ್ಥಸಾರಥಿಯ ಕೆಲಸ

| | |
|---|---|
| ಸಞ್ಜಯ ಉವಾಚ | ಸಂಜಯ ಹೇಳಿದನು. |

ಏವ ಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ ಮಧ್ಯೇ ಸ್ಥಾಪಯಿತ್ವಾರಥೋತ್ತಮಮ್ ॥೨೪॥

**ಭೀಷ್ಮ ದ್ರೋಣ ಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ''ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನ್'' ಇತಿ ॥೨೫॥**

| | |
|---|---|
| ಏವಂ ಗುಡಾಕೇಶೇನ ಉಕ್ತಃ | ಹೀಗೆ ಅರ್ಜುನನಿಂದ ಹೇಳಲ್ಪಟ್ಟ |
| ಹೃಷೀಕೇಶಃ ರಥೋತ್ತಮಮ್ | ಹೃಷೀಕೇಶನು ಆ ಉತ್ತಮ ರಥವನ್ನು |
| ಸೇನಯೋಃ ಉಭಯೋಃ ಮಧ್ಯೇ | ಸೇನೆಗಳೆರಡರ ನಡುವೆ (ಕೊಂಡು ಹೋಗಿ) |
| ಸ್ಥಾಪಯಿತ್ವಾ | ನಿಲ್ಲಿಸಿ |
| ಭೀಷ್ಮ ದ್ರೋಣ ಪ್ರಮುಖತ: ಸರ್ವೇ | ಭೀಷ್ಮ ದ್ರೋಣರ ಹಾಗೂ ಎಲ್ಲ |
| ಷಾಂ ಚಮಹೀಕ್ಷಿತಾಂ, | ಮಹೀಪತಿಗಳ ಸಮ್ಮುಖದಲ್ಲೂ |
| ಉವಾಚ 'ಪಾರ್ಥಪಶ್ಯೈತಾನ್ಸಮ | ಹೇಳಿದನು 'ಪಾರ್ಥ! ನೋಡು ಒಟ್ಟಿಗೆ ಕೂಡಿರುವ |
| ವೇತಾನ್ ಕುರೂನ್' ಇತಿ॥ | ಈ (ಎಲ್ಲ) ಕುರುವಂಶೀಯರನ್ನು' ಎಂದು ॥೨೫॥ |

## (ಅರ್ಜುನ ವಿಷಾದಾರಂಭ)

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೃನಥ ಪಿತಾಮಹಾನ್ ।**
**ಆಚಾರ್ಯಾನ್ ಮಾತುಲಾನ್ ಭ್ರಾತೃನ್ ಪುತ್ರಾನ್ ಪೌತ್ರಾನ್**
**ಸಖೀಂಸ್ತಥಾ॥೨೬॥**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**

ತಾನ್ ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥
ಕೃಪಯಾ ಪರಯಾವಿಷ್ಟೋ ವಿಷೀದನ್ನಿದ ಮಬ್ರವೀತ್ ।
(ತತ್ರ ಸ್ಥಿತಾನ್) ಅಲ್ಲಿ ಇದ್ದಂತಹ (ಪಿತೃನ್ ಇತ್ಯಾದಿ) ತಂದೆವರ್ಗದವರನ್ನೂ ತಾತಂದಿರನ್ನೂ, ಆಚಾರ್ಯವರ್ಗದವರನ್ನೂ, ಸೋದರವರ್ಗದವರನ್ನೂ, ಭ್ರಾತೃ-ಪುತ್ರ-ಪೌತ್ರ ವರ್ಗದವರನ್ನೂ ಹಾಗೆಯೇ ಮಿತ್ರರನ್ನೂ, ಮಾವಂದಿರನ್ನೂ, ಸುಹೃದ್ವರ್ಗದವರನ್ನೂ, ಸೇನೆಗಳೆರಡರಲ್ಲೂ ಕೂಡ (ಪಾರ್ಥಃ ಅಪಶ್ಯತ್) ಅರ್ಜುನನು ಕಂಡನು। (ತಾನ್ ಸಮೀಕ್ಷ್ಯ) ಅವರನ್ನೆಲ್ಲ ಚೆನ್ನಾಗಿ ನೋಡಿ, ಆ ಕುಂತೀಪುತ್ರನು, ಎಲ್ಲ ಬಂಧುಗಳೂ ಬಂದು ನಿಂತು ಬಿಟ್ಟಿದ್ದಾರೆಂದು, ಕೃಪಾತಿಶಯದಿಂದ ಆವೇಶಗೊಂಡವನಾಗಿ ವಿಷಾದಿಸುತ್ತಾ ಹೀಗೆ ಹೇಳಿದನು ।।

ಅರ್ಜುನ ಉವಾಚ (ಅಸ್ವಾಸ್ಥ್ಯದ ಆವಿರ್ಭಾವ)

ದೃಷ್ಟ್ವೇಮಂ ಸ್ವಜನಂ ಕೃಷ್ಣ ! ಯುಯುತ್ಸುಂ ಸಮುಪಸ್ಥಿತಂ ॥೨೮॥
ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥
ಗಾಣ್ಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥

| | |
|---|---|
| ಕೃಷ್ಣ ! ಯುಯುತ್ಸುಂ ಸಮುಪಸ್ಥಿತಂ | ಕೃಷ್ಣ! ಯುದ್ಧಮಾಡಿ ಮಡಿಯಲು ಬಂದಿರುವ |
| ಇಮಂ ಸ್ವಜನಂ ದೃಷ್ಟ್ವಾ | ಈ ಬಂಧು ಬಾಂಧವರನ್ನು ನೋಡಿದ ಮೇಲೆ, |
| ಮಮಗಾತ್ರಾಣಿ ಸೀದನ್ತಿ | ನನ್ನ ಅಂಗಾಂಗಗಳು ನಿಶ್ಚೇತನವಾಗುತ್ತಿವೆ ! |
| ಮುಖಂ ಪರಿಶುಷ್ಯತಿ ಚ | (ನನ್ನ) ಬಾಯಿ ಒಣಗಿ ಹೋಗುತ್ತಿದೆ ! |
| ಮೇ ಶರೀರೇ ವೇಪಥುಃ | ನನ್ನ ಶರೀರದಲ್ಲಿ ನಡುಕವುಂಟಾಗುತ್ತಿದೆ। |
| ರೋಮಹರ್ಷಶ್ಚ ಜಾಯತೇ । | ರೋಮಾಂಚನವೂ ಹುಟ್ಟಿಕೊಳ್ಳುತ್ತಿದೆ ! |
| ಮೇ ಗಾಂಡೀವಂ ಮೇ ಹಸ್ತಾತ್ | ನನ್ನ ಗಾಂಡೀವವು ನನ್ನ ಕೈಯಿಂದ |
| ಸ್ರಂಸತೇ । ತ್ವಕ್‌ಚ | ಜಾರುತ್ತಿದೆ. (ನನ್ನ ) ಚರ್ಮವಾದರೋ |
| ಪರಿದಹ್ಯತೇ ಏವ | ಎಲ್ಲೆಡೆ ಸುಡುತ್ತಲೇ ಇದೆ ! |
| ಅವಸ್ಥಾತುಂಚ ನಶಕ್ನೋಮಿ | ನಿಂತಿರಲೂ ಕೂಡ ಅಶಕ್ತನಾಗುತ್ತಿದ್ದೇನೆ ! |
| ಮೇ ಮನಃ ಚ ಭ್ರಮತಿ ಇವ | ನನ್ನ ಮನಸ್ಸೂ ಗಿರಗಿರನೆ ತಿರುಗುವಂತೆ |
| | ಭಾಸವಾಗುತ್ತಿದೆ ! ।।೨೮।।೨೯।।೩೦।। |

(ಅಪಶಕುನ ಮತ್ತು ಅಶ್ರೇಯಸ್ಸಿನ ಭಯ) ( ಸ್ವಜನಹನನ ತಪ್ಪು ಎಂಬ ಸೂಚನೆ)

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ! ।**
**ನಚ ಶ್ರೇಯೋಽನು ಪಶ್ಯಾಮಿ ಹತ್ವಾ ಸ್ವಜನ ಮಾಹವೇ ।।೩೧।।**

| | |
|---|---|
| ಕೇಶವ! ವಿಪರೀತಾನಿ | ಕೇಶವ ! ಪ್ರತಿಕೂಲವಾದ |
| ನಿಮಿತ್ತಾನಿಚ ಪಶ್ಯಾಮಿ! | ಶಕುನಗಳನ್ನೂ ಕೂಡ ಕಾಣುತ್ತಿದ್ದೇನೆ |

Funding: Tattva Heritage Foundation,Kolkata. Digitization: eGangotri.

| | |
|---|---|
| ಆಹವೇ (ಅಪಿ) ಸ್ವಜನಂ ಹತ್ವಾ | ಯುದ್ಧದಲ್ಲೇ ಆದರೂ ನೆಂಟರನ್ನು ಕೊಂದ ಮೇಲೆ |
| ಶ್ರೇಯಃ ಚನ+ಅನುಪಶ್ಯಾಮಿ | ಶ್ರೇಯಸ್ಸನ್ನೂ (ನಾನು) ಕಾಣುವುದಿಲ್ಲ ।।೩೧।। |

(ಸ್ವಜರ ಹನನಕ್ಕೆ ಬದಲು ಜಯ, ಸೌಖ್ಯ, ಐಶ್ವರ್ಯ, ಪ್ರಾಣ, ಎಲ್ಲ ಹೋಗಲಿ!)

ನಕಾಂಕ್ಷೇ ವಿಜಯಂ ಕೃಷ್ಣ ! ನಚ ರಾಜ್ಯಂ ಸುಖಾನಿಚ ।
ಕಿಂ ನೋ ರಾಜ್ಯೇನ ಗೋವಿಂದ ! ಕಿಂಭೋಗೈರ್ ಜೀವಿತೇನ ವಾ? ।।೩೨।।

| | |
|---|---|
| ನಕಾಂಕ್ಷೇ ವಿಜಯಂ ಕೃಷ್ಣ ! | ಬೇಡ ನನಗೆ ವಿಜಯ ಹೇಕೃಷ್ಣ ! |
| ನ ಚ ರಾಜ್ಯಂ ಸುಖಾನಿಚ | ರಾಜ್ಯವೂ ಬೇಡ! ಸುಖಭೋಗಗಳೂ ಬೇಡ! |
| ಕಿಂನೋ ರಾಜ್ಯೇನ ಗೋವಿನ್ದ ! | ಏನಾಗಬೇಕು ನಮಗೆ ರಾಜ್ಯದಿಂದ ಗೋವಿನ್ದ ! |
| ಕಿಂ ಭೋಗೈರ್ ಜೀವಿತೇನಾ ? | ಭೋಗಗಳಿಂದೇನಾಗಬೇಕು ? ಬದುಕಿನಿಂದ |
| | ತಾನೇ ಏನು ಪ್ರಯೋಜನ ? ॥೩೨॥ |

ಯೇಷಾಮರ್ಥೇಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿಚ ।
ತ ಇಮೇವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿಚ ।।೩೩ ।।

| | |
|---|---|
| ಯೇಷಾಮರ್ಥೇ ರಾಜ್ಯಂ, ಭೋಗಾಃ | ಯಾರಿಗೋಸ್ಕರವಾಗಿಯೇ ರಾಜ್ಯವೂ, ಭೋಗಗಳೂ, |
| ಸುಖಾನಿಚ, ನಃ ಕಾಂಕ್ಷಿತಂ, | ಸುಖಸೌಲಭ್ಯಗಳೂ, ನಮಗೆ ಬೇಕಾಗಿದ್ದವೋ, |
| ತೇ ಇಮೇ ಪ್ರಾಣಾನ್ ಧನಾನಿ ಚ | ಅಂತಹ ಇವರೇ ಪ್ರಾಣಗಳನ್ನೂ ಐಶ್ವರ್ಯಗಳನ್ನೂ |
| ತ್ಯಕ್ತ್ವಾ ಯುದ್ಧೇ ಅವಸ್ಥಿತಾಃ ! | ತ್ಯಾಗಮಾಡಿಬಂದು ರಣರಂಗದಲ್ಲಿ ನಿಂತಿದ್ದಾರೆ ! |

**ಆಚಾರ್ಯಾಃ, ಪಿತರಃ, ಪುತ್ರಾಃ, ತಥೈವ ಚ ಪಿತಾಮಹಾಃ ।**
**ಮಾತುಲಾಃ, ಶ್ವಶುರಾಃ, ಪೌತ್ರಾಃ, ಶ್ಯಾಲಾಃ, ಸಂಬಂಧಿನಸ್ತಥಾ ॥೩೪॥**

ಆಚಾರ್ಯರುಗಳು, ತಂದೆಯವರ್ಗದವರು, ಪುತ್ರವರ್ಗದವರು, ಹಾಗೆಯೇ ತಾತಂದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, (ಶ್ಯಾಲಾಃ) ಮೈದುನಂದಿರು, (ತಥಾ) ಹಾಗೇ ಸಂಬಂಧಿಗಳೂ (ಇಲ್ಲಿದ್ದಾರೆ)

**ಏತಾನ್ನ ಹಂತುಮಿಚ್ಛಾಮಿ ಘ್ನತೋऽಪಿ ಮಧುಸೂಧನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥೩೫॥**

| | |
|---|---|
| ಏತಾನ್ ಹನ್ತುಂ ನ ಇಚ್ಛಾಮಿ। | ಇವರನ್ನೆಲ್ಲ ಕೊಲ್ಲಲು ನಾನು ಇಚ್ಛಿಸುವುದಿಲ್ಲ ! |
| ಮಧುಸೂದನ! ಘ್ನತಃ ಅಪಿ ! | ಮಧುಸಂಹಾರಕನೇ ! ನಾನು ಹತನಾದರೂ ಸರಿ! |
| ಅಪಿತ್ರೈಲೋಕ್ಯರಾಜ್ಯಸ್ಯಹೇತೋಃ | ತ್ರೈಲೋಕ್ಯಾಧಿಪತಿತ್ವಕ್ಕಾದರೂ ಸರಿ ! |
| ಕಿಂ ನುಮಹೀಕೃತೇ ! | ಭೂಮಿರಾಜ್ಯಕ್ಕಾಗಿ ಮತ್ತೇನು ಹೇಳಲಿ ? |

(ಸ್ವಬಾಂಧವ ಸಂಹಾರದಿಂದ ಪಾಪ, ಕುಲಕ್ಷಯ ಧರ್ಮನಾಶ, ಸಾಂಕರ್ಯ, ಪಿತೃಪತನ, ನರಕ)

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ !**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥೩೬॥**

| | |
|---|---|
| ಧಾರ್ತರಾಷ್ಟ್ರಾನ್ ನಿಹತ್ಯ | ದೊಡ್ಡಪ್ಪನ ಮಕ್ಕಳನ್ನೆಲ್ಲ ಕೊಂದುಹಾಕಿ |
| ಕಾಪ್ರೀತಿಃ ಸ್ಯಾತ್, ಜನಾರ್ದನ ! | ಆದಾವ ಸಂತೋಷವಾದೀತು ? ಜನಾರ್ದನ ! |
| ಪಾಪಮೇವ ಆಶ್ರಯೇತ್ ಅಸ್ಮಾನ್ | ಪಾತಕವೇ ಬರುವುದು ನಮಗೆ ! |
| ಏತಾನ್ ಆತತಾಯಿನಃ ಹತ್ವಾ(ಅಪಿ)। | ದ್ರೋಹಿಗಳಾದ ಇವರನ್ನು ಕೊಂದರೂ ಕೂಡ ! |

(ಸ್ವಜನರು ದ್ರೋಹವೆಸಗಿದ್ದರೂ ಅವರನ್ನು ಕೊಲ್ಲುವುದು ಪಾಪವೇ ಎಂದು ಸಾರಾಂಶ)

**ತಸ್ಮಾನ್ನಾರ್ಹಾ ವಯಂ ಹನ್ತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ! ॥೩೭॥**

| | |
|---|---|
| ತಸ್ಮಾತ್, ಸ್ವಬಾಂಧವಾನ್ | ಪಾಪಕಾರ್ಯವಾದ್ದರಿಂದ ನಮ್ಮ ಅಣ್ಣತಮ್ಮಂದಿರೇ ಆಗಿರುವ |
| ಧಾರ್ತರಾಷ್ಟ್ರಾನ್ ಹನ್ತುಂ ವಯಂ ನಾರ್ಹಾಃ | ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲಲು ನಮಗೆ ಯೋಗ್ಯವಲ್ಲ। |
| ಸ್ವಜನಂ ಹಿ ಹತ್ವಾ | ನಮ್ಮ ಬಂಧುಗಳನ್ನೇ ಕೊಂದು ಹಾಕಿ |
| ಕಥಂ ಸುಖಿನಃ ಸ್ಯಾಮ, ಮಾಧವ! | ಹೇಗೆ ಸುಖಿಗಳಾದೇವು? ಮಾಧವ ! |

**ಯದ್ಯಪ್ಯೇತೇ ನ ಪಶ್ಯನ್ತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥೩೮॥**

ಯದ್ಯಪಿ ಏತೇ ಲೋಭೋಪಹತ ಚೇತಸಃ। ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ನ ಪಶ್ಯನ್ತಿ

ಇವರುಗಳಂತೂ ದುರಾಸೆಯಿಂದ ಬುದ್ಧಿ ಕೆಟ್ಟದ್ದಾರೆ। ಕುಲನಾಶದಿಂದಾಗುವ ದೋಷವನ್ನೂ ಮೈತ್ರಿ ಉಳ್ಳವರಿಗೆ ದ್ರೋಹವೆಸಗುವುದರಿಂದಾಗುವ ಪಾತಕವನ್ನೂ ಇವರುಗಳು ನೋಡುತ್ತಿಲ್ಲ. ॥೨೮॥

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ ಜನಾರ್ದನ! ॥೩೯॥**

ಅಸ್ಮಾಭಿಃ ಕುಲಕ್ಷಯ ಕೃತಂ ದೋಷಂ ಪ್ರಪಶ್ಯದ್ಭಿಃ, ಅಸ್ಮಾತ್ ಪಾಪಾತ್ ನಿವರ್ತಿತುಂ, ಕಥಂನ ಜ್ಞೇಯಂ? ಜನಾರ್ದನ!

ನಾವು ಕುಲನಾಶದಿಂದಾಗುವ ಕೆಡುಕುಗಳನ್ನು ಚೆನ್ನಾಗಿ ತಿಳಿದವರು, ಈ ಪಾಪದದೆಸೆಯಿಂದ ಹಿಮ್ಮೆಟ್ಟಬೇಕೆಂದು ಅರಿತುಕೊಳ್ಳದಿರಲು ಹೇಗೆ ಸಾಧ್ಯ? ಹೇ ಜನಾರ್ದನ! (ನೀನೇ ಹೇಳು) ॥೨೯॥

ಕುಲಕ್ಷಯೇ, ಪ್ರಣಶ್ಯನ್ತಿ, ಕುಲಧರ್ಮಾಃ, ಸನಾತನಾಃ ।
ಧರ್ಮೇ ನಷ್ಟೇ, ಕುಲಂ ಕೃತ್ಸ್ನಮ್, ಅಧರ್ಮೋಽಭಿಭವತ್ಯುತ ।।೪೦।।
ಕುಕ್ಷಯವಾದರೆ, ವಿನಾಶವಾಗುತ್ತವೆ, ಕುಲಾಚಾರಗಳು ಬಹಳ ಹಿಂದಿನಿಂದ ಬಂದವು!
ಆಚಾರಗಳೆಲ್ಲ ನಷ್ಟವಾದರೆ, ಕುಲವಿಡೀ ನಷ್ಟವಾಗುತ್ತದೆ: ದುರಾಚಾರವು (ಉತ)
ಆ ಸದಾಚಾರದ ಜಾಗದಲ್ಲಿ (ಅಭಿಭವತಿ) ಆಕ್ರಮಿಸುತ್ತದೆ ।।೪೦।।

ಅಧರ್ಮಾಭಿಭವಾತ್ಕೃಷ್ಣ । ಪ್ರದುಷ್ಯನ್ತಿ ಕುಲಸ್ತ್ರಿಯಃ ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ! ಜಾಯತೇ ವರ್ಣಸಂಕರಃ ।।೪೧।।
ಅಧರ್ಮಾ ಕ್ರಮಣದಿಂದ ಹೇಕೃಷ್ಣ! ಬಹಳ ಕೆಡುತ್ತಾರೆ ಕುಲಸ್ತ್ರೀಯರು ।।
ಸ್ತ್ರೀಯರು ಕೆಟ್ಟರೆ, ಹೇವೃಷ್ಣಿವಂಶ ಪ್ರದೀಪನೇ! ಉಂಟಾಗುತ್ತದೆ ವರ್ಣಸಂಕರ! ।।೪೧।।

ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।
ಪತನ್ತಿ ಪಿತರೋ ಹಿ+ಏಷಾಂ ಲುಪ್ತಪಿಣ್ಡೋದಕಕ್ರಿಯಾಃ ।।೪೨।।
ವರ್ಣಸಾಂಕರ್ಯ ನರಕವನ್ನೇ ಉಂಟುಮಾಡುತ್ತದೆ ಕುಲಘಾತುಕರಿಗೂ ಕುಲಕ್ಕೂ ।
(ಹಿ) ಏಕೆಂದರೆ, (ಏಷಾಂ ಪಿತರಃ) ಇವರ ಪಿತೃದೇವತೆಗಳು ಪಿಣ್ಡ-ತರ್ಪಣಜಲಗಳ-
ಲೋಪಹೊಂದಿ (ಪತನ್ತಿ) ಕೆಳಗೆ ಬೀಳುತ್ತಾರೆ ! ।।೪೨।।

ದೋಷೈರೇತೈಃ ಕುಲಘ್ನಾನಾಂ ವರ್ಣ–ಸಂಕರ–ಕಾರಕೈಃ ।
ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥

ಕುಘ್ನಾನಾಂ ವರ್ಣಸಂಕರಕಾರಕೈಃ ಕುಲಘಾತುಕರ ವರ್ಣಸಾಂಕರ್ಯಕಾರಕವಾದ
ಏತೈಃದೋಷೈಃ, ಶಾಶ್ವತಾಃ ಈ ಪ್ರಮಾದಗಳಿಂದ, ಶಾಶ್ವತವಾಗಿರಬೇಕಾದ
ಜಾತಿಧರ್ಮಾಃ ಕುಲಧರ್ಮಾಃಚ ವರ್ಣಾಚಾರಗಳೂ ಕುಲಾಚಾರಗಳೂ
ಉತ್ಸಾದ್ಯನ್ತೇ ಮಣ್ಣುಗೂಡಿಸಲ್ಪಡುತ್ತವೆ ।೪೩॥

ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ!
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥೪೪॥

ಕುಲಾಚಾರಹಾಳಾದ ಮನುಷ್ಯರಿಗೆ, ಜನಾರ್ದನನೇ! ನರಕದಲ್ಲಿ ನಿಯಮೇನ ವಾಸವು ಉಂಟಾಗುತ್ತದೆ ಎಂದು ಅನೂಚಾನವಾಗಿ ಶ್ರವಣ ಮಾಡಿದ್ದೇವೆ (ಅಲ್ಲವೆ?) ।೪೪)

ಅಹೋಬತ! ಮಹತ್‌ಪಾಪಂ ಕರ್ತುಂ ವ್ಯವಸಿತಾ ವಯಮ್
ಯದ್ ರಾಜ್ಯ ಸುಖಲೋಭೇನ ಹನ್ತುಂ ಸ್ವಜನ ಮುದ್ಯತಾಃ ।.೪೫॥

ಅಹೋ! ಬತ! ಮಹತ್ ಪಾಪಂ ಅಬ್ಬಾ! ಅನ್ಯಾಯವೇ! ಮಹಾಪಾತಕವನ್ನು
ಕರ್ತುಂ ವ್ಯವಸಿತಾಃ ವಯಮ್ । ಸಂಪಾದಿಸಲು ನಿಶ್ಚಯಿಸಿ ತೊಡಗಿಬಿಟ್ಟಿದ್ದೇವೆ ನಾವು !!!

Funding: Tattva Heritage Foundation,Kolkata. Digitization: eGangotri.

| | |
|---|---|
| ಯದ್‌ರಾಜ್ಯಸುಖಲೋಭೇನ | ಅದು ಹೇಗೆಂದರೆ ರಾಜ್ಯಸುಖದ |
| ಸ್ವಜನಮ್ | ದುರಾಸೆಯಿಂದ ನಮ್ಮ ಕುಲದವರನ್ನೇ |
| ಹನ್ತುಮ್ ಉದ್ಯತಾಃ | ಕೊಲ್ಲಲು ಸಿದ್ಧರಾಗಿಬಿಟ್ಟದ್ದೇವೆ!!! ॥೪೫॥ |

(ಹೀಗೆ ರಾಜ್ಯ ಸುಖಲೋಭದಿಂದ ಬಂಧುಹತ್ಯೆ ಮಾಡಿ ಮಹಾಪಾಪಿಗಳಾಗುವ ನಿರ್ಣಯ ಅತಿ ಶೋಚನೀಯ ಎಂದು ಅರ್ಜುನನ ನಿರ್ಣಯ)

(ಅಂತಹಮಹಾಪಾಪಸಂಘಟನೆಯ ಸಮಸ್ಯೆಗೆ ಅರ್ಜುನನ ಪರಿಹಾರ ಏನೆಂದರೆ)

**ಯದಿ ಮಾಮಪ್ರತೀಕಾರಮ್ ಅಶಸ್ತ್ರಂ ಶಸ್ತ್ರಪಾಣಯಃ।**
**ಧಾರ್ತರಾಷ್ಟ್ರಾ ರಣೇಹನ್ಯುಃ ತನ್ಮೇ ಕ್ಷೇಮತರಂ ಭವೇತ್ ॥೪೬॥**

| | |
|---|---|
| ಯದಿ, ಅಪ್ರತೀಕಾರಮ್, | ಒಂದು ವೇಳೆ, ಪ್ರತಿಭಟನೆಯಿಲ್ಲದ, |
| ಅಶಸ್ತ್ರಂ, ಮಾಮ್, | ಶಸ್ತ್ರವೂ ಇಲ್ಲದಿರುವ, ನನ್ನನ್ನು, |
| ಶಸ್ತ್ರಪಾಣಯಃ ಧಾರ್ತರಾಷ್ಟ್ರಾಃ | ಶಸ್ತ್ರಪಾಣಿಗಳಾಗಿ ಧಾರ್ತರಾಷ್ಟ್ರರು |
| ರಣೇ ಹನ್ಯುಃ, ತತ್ | ಯುದ್ಧದಲ್ಲಿ ಸಂಹಾರ ಮಾಡಿದರೆ, ಅದು |
| ಮೇ ಕ್ಷೇಮತರಂ ಭವೇತ್ ! | ನನಗೆ ಅತ್ಯಂತ ಶುಭ ಆದೀತು (!) ॥೪೬॥ |

(ಸಮಸ್ಯೆಗೆ ಪರಿಹಾರ ಕಂಡವನ ಸ್ಥಿತಿಯೇನೆಂದರೆ)

ಸಞ್ಜಯ ಉವಾಚ: ಸಂಜಯ ಹೇಳಿದನು :

**ಏವಮುಕ್ತ್ವಾಽರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥**

| | |
|---|---|
| ಏವಮ್ ಉಕ್ತ್ವಾ ಅರ್ಜುನಃ | 'ಹೀಗೆ ನುಡಿದು ಅರ್ಜುನನು |
| ಸಂಖ್ಯೇ | ಯುದ್ಧವಾಗಬೇಕಾದ ಸಮಯದಲ್ಲಿ |
| ಸಶರಂ ಚಾಪಂ ವಿಸೃಜ್ಯ | ಬಾಣಗಳ ಸಹಿತವಾಗಿ ಬಿಲ್ಲನ್ನೂ ಕೈ ಬಿಟ್ಟು |
| ಶೋಕಸಂವಿಗ್ನ ಮಾನಸಃ | ಶೋಕ ಸಂವೇಗ ಭರಿತವಾದ ಮನಸ್ಸುಳ್ಳವನಾಗಿ, |
| ರಥೋಪಸ್ಥೇ | (ಅಶ್ರುಪೂರ್ಣನಾಗಿ), ರಥದ ಮಡಿಲಿನಲ್ಲಿ (ಮಿತ್ರನೂ |
| ಉಪ+ಆವಿಶತ್ | ಸಾರಥಿಯೂ ಆದವನ) ಹತ್ತಿರ ಬಂದು ಕುಸಿದನು ! |

**॥ ಇತಿ ಶ್ರೀ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಅರ್ಜುನವಿಷಾದಯೋಗೋನಾಮ ಪ್ರಥಮೋಽಧ್ಯಾಯಃ ॥**

# ಅಥ ದ್ವಿತೀಯಾಧ್ಯಾಯ : ॥ ೭೨ ಶ್ಲೋ ॥

(ಭೀಷ್ಮ ಪರ್ವದಲ್ಲಿ ೨೬ ನೆಯ ಅಧ್ಯಾಯ)

ಸಂಜಯ ಉವಾಚ

**ತಂ ತಥಾ ಕೃಪಯಾವಿಷ್ಟಮ್ ಅಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತಮಿದಂ ವಾಕ್ಯಮ್ ಉವಾಚ ಮಧುಸೂದನಃ ॥೧॥**

| | |
|---|---|
| ತಥಾ ಕೃಪಯಾ ಆವಿಷ್ಟಮ್, | ಹಾಗೆ ಕಾರುಣ್ಯದಿಂದ ಆವೇಶಗೊಂಡಿರುವ |
| ಅಶ್ರು-ಪೂರ್ಣ-ಆಕುಲ-ಈಕ್ಷಣಮ್, | ಕಣ್ಣೀರು-ತುಂಬಿ-ಮಂಜಾಗಿರುವ-ದೃಷ್ಟಿಯುಳ್ಳ, |
| ವಿಷೀದನ್ತಮ್, ತಮ್, | ವಿಷಾದಿಸುತ್ತಿರುವ, ಬಳಿಗೆ ಬಂದು ಕುಸಿದ, ಆ |
| ಮಧುಸೂದನಃ, | ಅರ್ಜುನನನ್ನು ಕುರಿತು, ಮಧು ಕೈಟಭ ಸಂಹಾರಿಯು, |
| ಇದಂ ವಾಕ್ಯಂ ಉವಾಚ ॥ | ಈ ಮಾತನ್ನು ಆಡಿದನು. ॥೧॥ |

ಶ್ರೀ ಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ॥**
**ಅನಾರ್ಯಜುಷ್ಟಮಸ್ವರ್ಗ್ಯಮ್ ಅಕೀರ್ತಿಕರಮರ್ಜುನ ॥೨॥**

ಕುತಃ ವಿಷಮೇ ಇದಂ — ಎಲ್ಲಿಂದ ಈ ವಿಷಮ ಸಂದರ್ಭದಲ್ಲಿ ಈ
'ಕಶ್ಮಲಂ' ತ್ವಾ ಸಮುಪಸ್ಥಿತಮ್? — ಮನೋಮಾಲಿನ್ಯವು ನಿನಗೆ ಬಂದು ಸೇರಿತು ?
ಅರ್ಜುನ ! ಅನಾರ್ಯಜುಷ್ಟಂ : — ಅರ್ಜುನ! ಶಾಸ್ತ್ರವಶ್ಯರಲ್ಲದವರ ಚಿಂತನೆಯಿದು !
ಅಸ್ವರ್ಗ್ಯಂ: ಅಕೀರ್ತಿಕರಮ್ ॥ — ಪರಲೋಕವಿರೊಧಿಯಿದು! ಅಪಕೀರ್ತಿ ಜನಕವಿದು! ॥೨॥

**ಮಾಕ್ಲೈಬ್ಯಂ ಗಚ್ಛ ಕೌನ್ತೇಯ ! ನೈತತ್ ತ್ವಯ್ಯುಪಪದ್ಯತೇ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ ! ॥೩॥**

'ಕ್ಲೈಬ್ಯಂ' ಮಾಗಚ್ಛ ಕೌನ್ತೇಯ ! — ನಪುಂಸಕತ್ವವನ್ನು ಹೊಂದಬೇಡ, ಕುನ್ತೀಸುತನೇ !
ಏತತ್ ತ್ವಯಿ ನೋಪಪದ್ಯತೇ । — ಇದು ನಿನ್ನಲ್ಲಿ ಸರಿಹೊಂದುವುದಿಲ್ಲ ।
ಕ್ಷುದ್ರಂ ಹೃದಯದೌರ್ಬಲ್ಯಂ — ಅತಿನಿಕೃಷ್ಟವಾದ ಮನೋದೌರ್ಬಲ್ಯವನ್ನು
ತ್ಯಕ್ತ್ವಾ ಉತ್ತಿಷ್ಠ, ಪರನ್ತಪ ! — ಬಿಟ್ಟು ಮೇಲೇಳು, ಶತ್ರುನಿಗ್ರಾಹಕನೇ ! ॥

ಅರ್ಜುನಉವಾಚ

**ಕಥಂಭೀಷ್ಮಮಹಂ ಸಙ್ಖ್ಯೇ ದ್ರೋಣಂ ಚ ಮಧುಸೂದನ । ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ । ॥೪॥**

| | |
|---|---|
| ಮಧು ಸೂದನ ! | ಮಧು ಕೈಟಭ ಸಂಹಾರಕನೇ ! |
| ಕಥಮ್ ಅಹಂ ಭೀಷ್ಮಂ | ಹೇಗೆ ತಾನೇ ನಾನು ಭೀಷ್ಮರನ್ನೂ ದ್ರೋಣರನ್ನೂ ; |
| ದ್ರೋಣಂಚ, ಪೂಜಾರ್ಹೌ, ಸಂಖ್ಯೇ | ಪೂಜನೀಯರಾದವರನ್ನು, ಯುದ್ಧದಲ್ಲಿ |
| ಇಷುಭಿಃ ಪ್ರತಿಯೋತ್ಸ್ಯಾಮಿ | ಬಾಣಗಳಿಂದ ಪ್ರತಿ ಪ್ರಹಾರ ಮಾಡಲಿ |
| ಅರಿಸೂದನ ! | ಶತ್ರುಸಂಹಾರಕನೇ ! (ಹೇಳು) ॥೪॥ |

**ಗುರೂನಹತ್ವಾಹಿ ಮಹಾನುಭಾವಾನ್ ಶ್ರೇಯಶ್ಚರ್ತುಂಭೈಕ್ಷಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯ ಭೋಗಾನ್ ರುಧಿರ ಪ್ರದಿಗ್ಧಾನ್ ॥೫॥**

| | |
|---|---|
| ಮಹಾನುಭಾವಾನ್ ಗುರೂನ್ ಅಹತ್ವಾ | ಮಹಾನುಭಾವರಾದ ಗುರುಹಿರಿಯರನ್ನು ಕೊಲ್ಲದೆ |
| ಇಹಲೋಕೇ ಭೈಕ್ಷಂ ಚರ್ತುಮಪಿ | ಈ ನರಲೋಕದಲ್ಲಿ ಭಿಕ್ಷಾಟನೆ ಮಾಡುವುದೂ ಕೂಡ |
| ಶ್ರೇಯಃ। ಇಹಅರ್ಥಕಾಮಾನ್ ಗುರೂನ್ | ಶ್ರೇಯಸ್ಕರವೇ। ಇಲ್ಲಿ ಅರ್ಥಾದಿ ಅಪೇಕ್ಷೆಯುಳ್ಳ |
| ಹತ್ವಾತು : ರುಧಿರಪ್ರದಿಗ್ಧಾನೇವ | ಗುರುಗಳನ್ನು ಸಂಹರಿಸಿದ ಮೇಲಾದರೋ, (ಅವರ) |
| ಭೋಗಾನ್ ಭುಞ್ಜೀಯ ? | ರಕ್ತಸಿಕ್ತವಾದ ಅದೇ ಭೋಗಗಳನ್ನೇ, ಭೋಗಿಸಲೇ ? |

**ನಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾಜಯೇಮ ಯದಿ ವಾ**
**ನೋಜಯೇಯುಃ।**
**ಯಾನೇವ ಹತ್ವಾನ ಜಿಜೀವಿಷಾಮಃ ತೇಽವಸ್ಥಿತಾಃ ಪ್ರಮುಖೇಧಾರ್ತರಾಷ್ಟ್ರಾಃ ॥೬॥**

| | |
|---|---|
| ಯದ್ವಾ ಜಯೇಮ, | ನಾವು (ಶತ್ರುಗಳನ್ನು ಕೊಂದು) ಗೆಲ್ಲಬೇಕೋ ? |
| ಯದಿ ವಾ ನಃ ಜಯೇಯುಃ | ನಮ್ಮನ್ನೇ (ಕೊಂದು) ಅವರು ಗೆಲ್ಲಬೇಕೋ ? |
| ಕತರತ್, ನಃ ಗರೀಯಃ ? | ಇವೆರಡರಲ್ಲಿ ಯಾವುದೊಂದು, ನಮಗೆ ಶ್ರೇಯಸ್ಕರ ? |
| ಏತತ್ ನ ವಿದ್ಮಃ । ಯಾನ್ ಹತ್ವಾ | ಇದನ್ನು ನಾವು ತಿಳಿದಿಲ್ಲ । ಯಾರನ್ನು ಕೊಂದು |
| ನಜಿಜೀವಿಷಾಮಃ ಏವ, | ನಾವು ಬದುಕಿರಲು ಇಚ್ಛಿಸುವುದೇ ಇಲ್ಲವೋ, |
| ತೇಧಾರ್ತರಾಷ್ಟ್ರಾಃ ಪ್ರಮುಖೇ | ಆ ಧೃತರಾಷ್ಟ್ರಪುತ್ರರೇ ಎದುರಾಗಿ |
| ಅವಸ್ಥಿತಾಃ। | ನಿಂತಿದ್ದಾರೆ. |

**ಕಾರ್ಪಣ್ಯದೋಷೋಪಹತಸ್ವಭಾವಃ, ಪೃಚ್ಛಾಮಿ ತ್ವಾ ಧರ್ಮಸಂಮೂಢಚೇತಾಃ।**
**ಯಚ್ಛ್ರೇಯಃಸ್ಯಾತ್ ನಿಶ್ಚಿತಂ, ಬ್ರೂಹಿತನ್ಮೇ, ಶಿಷ್ಯಸ್ತೇಽಹಂ, ಶಾಧಿಮಾಂತ್ವಾಂ**
**ಪ್ರಪನ್ನಮ್ ॥೭॥**

| | |
|---|---|
| ಕಾರ್ಪಣ್ಯದೋಷ-ಉಪಹತ-ಸ್ವಭಾವಃ। | ದೈನ್ಯವೆಂಬ ದೋಷದಿಂದ -ಹತವಾದ-ಸಹಜಕ್ಷಾತ್ರಭಾವ |
| ಧರ್ಮ-ಸಂಮೂಢಚೇತಾಃ | ಉಳ್ಳವನಾಗಿದ್ದೇನೆ। ಸರಿದಾರಿಯ ಬಗ್ಗೆ-ಸಂಭ್ರಾಂತ |
| | ಚಿತ್ತನಾಗಿರುವ |

| | |
|---|---|
| ತ್ವಾಪೃಚ್ಛಾಮಿ- ಯತ್ | ನಾನು ನಿನ್ನನ್ನು ಕೇಳುತ್ತಿದ್ದೇನೆ - ಯಾವುದರಿಂದ ನನಗೆ |
| ಮೇಶ್ರೇಯಃಸ್ಯಾತ್ (ಇತಿ) ನಿಶ್ಚಿತಂ, | ಶ್ರೇಯಸ್ಸಾಗುವುದೆಂದು (ನಿನ್ನಿಂದ) |
| ತತ್ ಬ್ರೂಹಿ। ಅಹಮ ತೇ ಶಿಷ್ಯಃ। | ನಿಶ್ಚಯಿಸಲ್ಪಟ್ಟಿದೆಯೋ, ಅದನ್ನು ಹೇಳು। ನಾನು ನಿನಗೆ ಶಿಷ್ಯ। |
| ತ್ವಾಪ್ರಪನ್ನಂ ಮಾಂಶಾಧಿ | ನಿನಗೆ ಶರಣಾಗತನಾಗಿರುವ ನನ್ನನ್ನು ಕುರಿತು |
| | ಅನುಶಾಸನ ಮಾಡು |

**ನಹಿಪ್ರಪಶ್ಯಾಮಿ ಮಮಾಪನುದ್ಯಾದ್ ಯಚ್ಛೋಕ ಮುಚ್ಛೋಷಣಮಿನ್ದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ ರಾಜ್ಯಂ, ಸುರಾಣಾಮಪಿ ಚಾಧಿಪತ್ಯಮ್ ॥೮॥**

| | |
|---|---|
| ಹಿ, ಭೂಮೌ ಅಸಪತ್ನಂ ಋದ್ಧಂ ರಾಜ್ಯಂ, | ಏಕೆಂದರೆ, ಭೂಮಿಯಮೇಲೆ ಶತ್ರುರಹಿತ-ಸಮೃದ್ಧ- |
| ಅವಾಪ್ಯ ಅಪಿ, ಸುರಾಣಾಮ್ | ರಾಜ್ಯವನ್ನು ಪಡೆದರೂ ಕೂಡ, ದೇವತೆಗಳ |
| ಆಧಿಪತ್ಯಂಚ ಅವಾಪ್ಯಾಪಿ, | ಒಡೆತನವನ್ನೂ ಹೊಂದಿದರೂ ಕೂಡ, |
| ಯತ್ ಇಂದ್ರಿಯಾಣಾಂ ಉಚ್ಛೋಷಣಂ | ಯಾವುದು ಇಂದ್ರಿಯಗಳನ್ನೆಲ್ಲ ಒಣಗಿಸುವಂತಹ |
| ಶೋಕಮ್ ಅಪನುದ್ಯಾತ್, | ಶೋಕವನ್ನು ಪರಿಹರಿಸುತ್ತದೆಯೋ, |
| (ತತ್)ನ ಪ್ರಪಶ್ಯಾಮಿ । | ಅದನ್ನು ನಾನು ಕಾಣುತ್ತಿಲ್ಲ ॥ |

ಸಂಜಯ ಉವಾಚ :

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರನ್ತಪಃ ।**
**ನಯೋತ್ಸ್ಯ ಇತಿ ಗೋವಿಂದಮ್ ಉಕ್ತ್ವಾ ತೂಷ್ಣೀಂಬಭೂವಹ ॥೯॥**

| | |
|---|---|
| ಪರಂತಪಃಗುಡಾಕೇಶಃಏವಂ ಹೃಷೀಕೇಶಂ | ಶತ್ರುನಿಗ್ರಾಹಕನಾದ ಅರ್ಜುನನು ಹೀಗೆ ಹೃಷೀಕೇಶನಿಗೆ |
| ಉಕ್ತ್ವಾ, ಗೋವಿನ್ದಂ ನ ಯೋತ್ಸ್ಯೇ ಇತಿ | ನಿವೇದಿಸಿ, 'ಗೋವಿಂದ! ನಾನು ಯುದ್ಧ ಮಾಡುವುದಿಲ್ಲ' |
| ಉಕ್ತ್ವಾ, ತೂಷ್ಣೀಂ ಬಭೂವ | ಎಂದು ಹೇಳಿ, ಸುಮ್ಮನಾಗಿ ಬಿಟ್ಟನು । |
| ಹ! | ಆಶ್ಚರ್ಯ ! |

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ! ।**
**ಸೇನಯೋರುಭಯೋರ್ ಮಧ್ಯೇ ಸೀದಮಾನಮಿದಂ ವಚಃ ॥೧೦॥**

| | |
|---|---|
| ಭಾರತ! ಉಭಯೋಃ ಸೇನಯೋಃ | ಭರತವಂಶೀಯನೇ ! ಎರಡು ಬಣಗಳ |
| ಮಧ್ಯೇ | ನಡುವೆ |
| ಸೀದ ಮಾನಂ, ತಮ್, | ನಿಷ್ಕ್ರಿಯನಾಗುತ್ತಿರುವಂತಹ, ಆ ಅರ್ಜುನನ್ನು ಕುರಿತು, |
| ಹೃಷೀಕೇಶಃ ಪ್ರಹಸನ್ನಿವ | ಹೃಷೀಕೇಶನು ಪರಿಹಾಸ್ಯಮಾಡುತ್ತಿದ್ದಾನೋ ಎಂಬಂತೆ |
| ಇದಂ ವಚಃ ಉವಾಚ | ಈ ಮಾತನ್ನು ಹೇಳಿದನು ।೧೦॥ |

ಶ್ರೀಭಗವಾನ್ ಉವಾಚ :

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಣ್ಡಿತಾಃ ॥೧೧॥**

ಅಶೋಚ್ಯಾನ್ (ಪ್ರತಿ), ತ್ವಂ, ಅನ್ವಶೋಚಃ — ಶೋಕಿಸಬೇಕಿಲ್ಲದವುಗಳನ್ನು ಕುರಿತು, ನೀನು, ಒಂದೇ ಸಮನೆ ಶೋಕಿಸುತ್ತಿರುವೆ!

ಪ್ರಜ್ಞಾವಾದಾನ್ ಚ ಭಾಷಸೇ — ಪ್ರಜ್ಞೆ ಇದ್ದವರಂತೆ ವಾದಗಳನ್ನೂ ಮಾಡುತ್ತಿದ್ದೀಯೆ!

ಗತಾಸೂನ್ ಅಗತಾಸೂನ್ ಚ — ದೇಹಗಳ ಬಗ್ಗೆಯಾಗಲಿ ಆತ್ಮಗಳ ಬಗ್ಗೆಯಾಗಲಿ

ಪಣ್ಡಿತಾಃ ನ ಅನುಶೋಚನ್ತಿ । — ದೇಹಾತ್ಮತಾರತಮ್ಯ ಪ್ರಜ್ಞೆ ಶುದ್ಧವಾಗಿರುವವರು ಅನುಸ್ಯೂತವಾಗಿ ಶೋಕಿಸುವುದಿಲ್ಲ ॥೧೧॥

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥**

ಅಹಂ ಜಾತು ನ ಆಸಂ (ಇತಿ) ನತು ಏವ । — (ಸರ್ವೇಶ್ವರನಾದ) ನಾನು ಯಾವುದೇ ಕಾಲದಲ್ಲಿ (ಹಿಂದೆ) ಇರಲಿಲ್ಲ ಎಂಬುದು ಇಲ್ಲವೇ ಇಲ್ಲ!

ತ್ವಂ — ನೀನು ಯಾವುದೇ ಸಮಯದಲ್ಲಿ ಇರಲಿಲ್ಲ ಎಂಬುದು ಇಲ್ಲವೇ ಇಲ್ಲ!

| | |
|---|---|
| ನೇಮೇ ಜನಾಧಿಪಾಃ । | ಈ ಜನನಾಯಕರೆಲ್ಲರೂ ಯಾವುದೇ ಸಮಯದಲ್ಲಿ |
| ಚ, ಅತಃಪರಂ । | ಇರಲಿಲ್ಲ ಎಂಬುದು ಇಲ್ಲವೇ ಇಲ್ಲ । ಮತ್ತು ಇನ್ನು ಮುಂದೆ |
| ಜಾತುಸರ್ವೇವಯಂ ನಭವಿಷ್ಯಾಮಃ | ಯಾವುದೇ ಸಮಯದಲ್ಲಿ, ನಾವೆಲ್ಲರೂ, ಇರುವುದಿಲ್ಲ |
| ಇತಿ ನೈವ ॥ | ಎಂಬುದು ಇಲ್ಲವೇ ಇಲ್ಲ ॥೧೨॥ |

(ನಾವು (ಆತ್ಮಗಳು) ಅನಾದಿಕಾಲದಿಂದಲೂ ಇದ್ದೇವೆ, ಅನಂತಕಾಲವೂ ಇರುತ್ತೇವೆ, ಇಲ್ಲದ ಕಾಲವೇ ಇಲ್ಲ)

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿಃ ಧೀರಸ್ ತತ್ರ ನ ಮುಹ್ಯತಿ ॥೧೩॥**

| | |
|---|---|
| ಅಸ್ಮಿನ್ ದೇಹೇ | ಈ ಒಂದು ದೇಹದಲ್ಲಿ (ಇರುವ) |
| ದೇಹಿನಃ ಯಥಾ | ದೇಹಾಧಿಪನಾದ ಆತ್ಮನಿಗೆ ಹೇಗೆ |
| ಕೌಮಾರಂ ಯೌವನಂ ಜರಾ | ಕುಮಾರಾವಸ್ಥೆಯೂ ಯೌವನವೂ ಮುಪ್ಪೂ ಬರುತ್ತದೆಯೋ |
| ತಥಾ ದೇಹಾಂತರಪ್ರಾಪ್ತಿಃ | ಹಾಗೆಯೇ ಮತ್ತೊಂದು ದೇಹದ ಪ್ರಾಪ್ತಿಯೂ ಕೂಡ । |
| ಧೀರಃ ತತ್ರ | ಧೀಮಂತನು ಆ ವಿಷಯದಲ್ಲಿ |
| ನಮುಹ್ಯತಿ | ದಿಗ್ಭ್ರಾಂತನಾಗುವುದಿಲ್ಲ (ಶೋಕಿಸುವುದಿಲ್ಲ) ॥೧೩॥ |

(ಬಾಲಕದೇಹ — ಯುವಕದೇಹ — ಮುದುಕದೇಹ — ಬೇರೊಂದು ದೇಹ — ಅಷ್ಟೇ, ಎಂದು ತಿಳಿಯುವವನೇ ಧೀರ)

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣ ಸುಖದುಃಖದಾಃ।**
**ಆಗಮಾಪಾಯಿನೋಽನಿತ್ಯಾಃ ತಾಂಸ್ತಿತಿಕ್ಷಸ್ವ ಭಾರತ ॥೧೪॥**

| | |
|---|---|
| ಮಾತ್ರಾಸ್ಪರ್ಶಾಃತು | ಇಂದ್ರಿಯ ವಿಷಯಗಳ ಸಂಪರ್ಕಗಳಾದರೋ, (ದೇಹಾನ್ತರ ಪ್ರಾಪ್ತಿಗೆ ಮುಂಚೆಯೇ) |
| ಶೀತೋಷ್ಣ-ಸುಖ-ದುಃಖ-ದಾಃ | ಶಿತೋಷ್ಣ ಮುಂತಾದ ದ್ವಂದ್ವಗಳ ರೂಪದಲ್ಲಿ ಸುಖದುಃಖಗಳನ್ನು ಕೊಡುವಂತಹವು । |
| ಆಗಮ+ಅಪಾಯಿನಃ । | ಬರುತ್ತವೆ ಹೋಗುತ್ತವೆ |
| ಅನಿತ್ಯಾಃ । | ಅನಂತ ಕಾಲದವರೆಗೆ ಬರುತ್ತಿರುವಂತಹವಲ್ಲ |
| ತಾನ್ ತಿತಿಕ್ಷಸ್ವ ಭಾರತ । | ಅವುಗಳನ್ನು ಸಹಿಸಿಕೋ ಭರತಕುಲತಿಲಕ ! |

(ಹೇ ಧೀರ ! ಇಂದ್ರಿಯ ಮತ್ತು ವಿಷಯಗಳ ಪರಸ್ಪರ ಸಂಪರ್ಕ ದಿಂದ ಕುಣಿಯಬೇಡ ಕುದಿಯಬೇಡ ಕುಸಿಯಬೇಡ)

**ಯಂ ಹಿ ನವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥೧೫॥**

| | |
|---|---|
| ಯಂ ಸಮದುಃಖಸುಖಂ | ಯಾವ ದುಃಖಸುಖಗಳನ್ನು ಸಮನಾಗಿಯೇ ಕಾಣುವ |
| ಧೀರಂ ಪುರುಷಂ | ಧೈರ್ಯಯುಕ್ತನಾದ ಚೇತನನನ್ನು |

ಏತೇ ನ ವ್ಯಥಯನ್ತಿ — ಈ 'ಮಾತ್ರಾಸ್ಪರ್ಶ'ಗಳು ವ್ಯಥೆಪಡಿಸುವುದಿಲ್ಲವೋ (ಉದ್ವೇಗಪಡಿಸುವುದಿಲ್ಲವೋ)

ಹೇ ಪುರುಷರ್ಷಭ। — ಎಲೈ ಪುರುಷ ಪುಂಗವನೇ (ಸಾತ್ವಿಕಪುರುಷನೇ!)

ಸಃ ಅಮೃತತಾಯ ಕಲ್ಪತೇ — ಆ ಚೇತನನು ಮರಣರಹಿತ (ಶಾಶ್ವತ) ಆನಂದದ ಸಿದ್ಧಿಗೆ ಅರ್ಹನಾಗುತ್ತಾನೆ ।।೧೫।।

(ಸುಖವೋ, ದುಃಖವೋ, ಅಮೃತತ್ವದ ಧ್ಯೇಯ ಸದಾ ಇರುವವನೇ ಧೀರ)

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ ತ್ವನಯೋಸ್ತತ್ತ್ವದರ್ಶಿಭಿಃ ।।೧೬।।**

ಅಸತಃ ಭಾವಃ — ಅಸತ್ತಾದುದಕ್ಕೆ (ದೇಹಕ್ಕೆ) ಸದ್‌ಭಾವ (ಅಸ್ತಿತ್ವ)

ನವಿದ್ಯತೇ। ಸತಃ — ಇರುವುದಿಲ್ಲ। ಸತ್ ಆದುದಕ್ಕೆ (ಆತ್ಮನಿಗೆ)

ಅಭಾವಃ ನವಿದ್ಯತೇ। — ಅಸತ್ತ್ವ (ಅಭಾವ) ಇರುವುದಿಲ್ಲ

ಅನಯೋಃ ಉಭಯೋಃ ಅಪಿ — ಈ ಸದಸತ್ತುಗಳೆರಡರ ಬಗ್ಗೆಯೂ

ಅನ್ತಃ ತು ತತ್ತ್ವದರ್ಶಿಭಿಃ — ನಿರ್ಣಯವಾದರೋ ತತ್ತ್ವದರ್ಶಿಗಳಿಂದ

ದೃಷ್ಟಃ। — ದರ್ಶನ ಮಾಡಲ್ಪಟ್ಟಿದೆ ।೧೯)

(ಅಮೃತತತ್ತ್ವ ಸಿದ್ಧಿಸಬೇಕಾದರೆ ಶಾಶ್ವತದಲ್ಲಿ ಪೂರ್ಣ ಆಸಕ್ತನಾಗು, ಅಶಾಶ್ವತದಲ್ಲಿ ಅಂಟಬೇಡ)

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥೧೭॥**

| | |
|---|---|
| ಯೇನ | ಯಾವ ಆತ್ಮವಸ್ತುವಿನಿಂದ |
| ಇದಂ ಸರ್ವಂ, ತತಮ್ | ಈ ಅಚೇತನ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆಯೋ |
| ತತ್ತು ಅವಿನಾಶಿ ವಿದ್ಧಿ । | ಅದಾದರೋ ವಿನಾಶವಿಲ್ಲದ್ದೆಂದು ತಿಳಿ। |
| ಅವ್ಯಯಸ್ಯ ಅಸ್ಯ | ವಿನಾಶಾರ್ಹವಲ್ಲದ ಈ ಚೇತನ ತತ್ತ್ವಕ್ಕೆ) |
| ಕಶ್ಚಿತ್ ವಿನಾಶಂ ಕರ್ತುಂ ನಾರ್ಹತಿ । | ಯಾವ ಪದಾರ್ಥವೂ ವಿನಾಶ ಉಂಟುಮಾಡಲು ಶಕ್ತವಾಗಿಲ್ಲ ॥೧೭॥ |

(ದೃಶ್ಯದಲ್ಲಿ ಹೊಕ್ಕಿರುವ ಅದೃಶ್ಯ ವಸ್ತುಗಳೇ ನಾವುಗಳು, ಆತ್ಮಗಳು। ಯಾವ ವಸ್ತುವಿನಿಂದಲೂ ಆತ್ಮಕ್ಕೆ ನಾಶ ಇಲ್ಲ)

**ಅನ್ತವನ್ತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ ಯುಧ್ಯಸ್ವ ಭಾರತ ! ॥೧೮॥**

| | |
|---|---|
| ಅಪ್ರಮೇಯಸ್ಯ, | ಪ್ರಮಾತಾ (ತಿಳಿದುಕೊಳ್ಳುವ ವಸ್ತು) ವಾಗಿರುವ, |
| ಅನಾಶಿನಃ, ನಿತ್ಯಸ್ಯ, | ನಾಶಾನರ್ಹವಾಗಿರುವ, ಸಾರ್ವಕಾಲಿಕವಾಗಿರುವ, |

ಶರೀರಿಣಃ, ಇಮೇ — ಕರ್ಮ ಶರೀರಧಾರಿಯಾಗಿರುವ (ಆತ್ಮನ) ಈ,

ದೇಹಾಃ — ಅನೇಕ ಭಾಗಗಳ ಸಂಘಟನೆಯಾಗಿರುವ ಶರೀರಗಳು,

ಅನ್ತವನ್ತಃ, ಉಕ್ತಾಃ। — ವಿನಾಶವುಳ್ಳವುಗಳೇ, ಎಂದು ನಿರ್ಣಯಿಸಲ್ಪಟ್ಟಿವೆ।

ತಸ್ಮಾತ್ ಭಾರತ! ಯುಧ್ಯಸ್ವ — ಆದ ಕಾರಣ, ಭರತ ಕುಲಮಣಿಯೇ। ಯುದ್ಧ ಮಾಡು।

(ಆತ್ಮಕ್ಕೆ ಅರಿವುಂಟು, ನಾಶವಿಲ್ಲ, ಅನಾದಿಕಾಲದಿಂದ ಇದೆ, ಕರ್ಮ ಶರೀರದ ಒಡೆತನವುಂಟು; ಭಾಗಗಳಿಲ್ಲ ದೇಹಕ್ಕೆ। ಅರಿವಿಲ್ಲ, ನಾಶವುಂಟು, ನನ್ನ ಮಾನ್ಯ ಬಂದ ಆಕಾರ, ಆತ್ಮದ ಒಡೆಯನಲ್ಲ, ಅದು ಭಾಗಗಳಿಂದ ಘಟಿತ।)

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್।**
**ಉಭೌ ತೌ ನ ವಿಜಾನೀತಃ ನಾಯಂ ಹನ್ತಿ ನ ಹನ್ಯತೇ ॥೧೯॥**

ಏನಂ(ಪ್ರತಿ), ಹನ್ತಾರಂ, ಯಃ ವೇತ್ತಿ — ಇಂತಹ ಆತ್ಮನನ್ನು ಕುರಿತು, ಮಾರಕವನ್ನು, ಯಾವಾತನು ತಿಳಿದಿದ್ದಾನೋ,

ಯಃ ಚ, ಏನಂ, ಹತಂ, ಮನ್ಯತೇ, — ಯಾವ ಮತ್ತೊಬ್ಬನು, ಇವನನ್ನು, ಹತನನ್ನಾಗಿ ಭಾವಿಸುತ್ತಾನೋ,

ಉಭೌ ತೌ ನ ವಿಜಾನೀತಃ। — ಅವರಿಬ್ಬರೂ ವಿವೇಕವಿಲ್ಲದವರು।

ಅಯಂ ನ ಹನ್ತಿ। — ಈ ಅಚೇತನವಸ್ತುವು(ಆತ್ಮನನ್ನು) ಕೊಲ್ಲಲಾರದು।

ಅಯಂ ನ ಹನ್ಯತೇ। — ಈ ಚೇತನನನ್ನು ಕೊಲ್ಲಲ್ಪಡುವುದಿಲ್ಲ.

(ಆತ್ಮನನ್ನು ಆಯುಧ ಕೊಂದಿತು, ಆತ್ಮ ಸತ್ತಿತು, ಎನ್ನುವ ಇಬ್ಬರೂ ಅಜ್ಞಾನಿಗಳು)

**ನ ಜಾಯತೇ ಮ್ರಿಯತೇವಾ ಕದಾಚಿತ್ ನಾಯಂ ಭೂತಾ ಭವಿತಾವಾನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನಹನ್ಯತೇ ಹನ್ಯಮಾನೇ ಶರೀರೇ ॥೨೦॥**

| | |
|---|---|
| ಅಯಂ ಕದಾಚಿತ್ ನಜಾಯತೇ । | ಇವನು ಯಾವ ಕಾಲದಲ್ಲೂ ಹುಟ್ಟುವುದಿಲ್ಲ |
| ನ ಮ್ರಿಯತೇವಾ । | ಇವನು ಯಾವ ಕಾಲದಲ್ಲೂ ಸಾಯುವುದೂ ಇಲ್ಲ. |
| ಅಯಂ ಭೂತ್ವಾ ಭೂಯಃ | ಇವನು (ಕಲ್ಪಾದಿಯಲ್ಲಿ) ಹುಟ್ಟಿ,ಮತ್ತೆ (ಕಲ್ಪಾಂತದಲ್ಲಿ) |
| ನಭವಿತಾ ನ । | ಇರುವುದಿಲ್ಲ ಎಂಬುದು ಇಲ್ಲ । |

(ಕೆಲವು ಪ್ರಜಾಪ್ಸತಿಗಳು ಕಲ್ಪಾದಿಯಲ್ಲಿ, ಎಂದರೆ ಬ್ರಹ್ಮದೇವರ ಹಗಲ ಪ್ರಾರಂಭದಲ್ಲಿ, ಹುಟ್ಟಿ ಕಲ್ಪಾಂತದಲ್ಲಿ, ಎಂದರೆ ಅವರ ರಾತ್ರಿಯಾರಂಭದಲ್ಲಿ, ಮಡಿಯುತ್ತಾರೆ । ಹಾಗಲ್ಲ ಅವರ ಆತ್ಮಗಳು ಮತ್ತಿತರ ವ್ಯಕ್ತಿಗಳ ಆತ್ಮಗಳು ಅವರ ದೇಹಗಳು ಮಾತ್ರ, ಇತರ ವ್ಯಕ್ತಿಗಳ ದೇಹಕ್ಕಿಂತ ದೀರ್ಘಾಯು ಅಷ್ಟೆ !) (ಆದ್ದರಿಂದ)

| | |
|---|---|
| ಅಯಂ ಅಜಃ।, ನಿತ್ಯ: | ಆತ್ಮನು ಎಂದೂ ಜನಿಸಿದವನಲ್ಲ, ಅಂತ್ಯವಿಲ್ಲದವನು। |
| ಶಾಶ್ವತಃ । | ಸ್ವರೂಪ ವಿಕಾರವಿಲ್ಲದೆ ಏಕ ರೂಪನಾಗಿರುವನು। |
| ಪುರಾಣಃ । | ಹಳೆಯದೆನಿಸದೆ ಎಷ್ಟು ಕಾಲವಾದರೂ ನವನವೀನ |
| ಶರೀರೇಹನ್ಯಮಾನೇ | ವಾಗಿಯೇ ಇರುವವನು । ಶರೀರ ಹತವಾಗುತ್ತಿರುವಾಗ |
| ನ ಹನ್ಯತೇ | ಇವನು ಹತನಾಗುವುದಿಲ್ಲ ॥ |

(ಹೇಚೇತನ ! ಆತ್ಮಗಳೆಲ್ಲ ಅಜ-ಅಮರ ಮಾತ್ರವಲ್ಲ, ಶಾಶ್ವತನವನವೀನವಸ್ತು ।
ಆನಂದಮಯವಾದ್ದರಿಂದ)

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ॥೨೧॥**

| | |
|---|---|
| ಅವಿನಾಶಿನಂ, ಅಜಂ, ಅವ್ಯಯಂ, | ಅವಿನಾಶಿ, ಆದಿಕಾಲರಹಿತ, ಅವಿಕಾರಿ, |
| ನಿತ್ಯಂ, ಯಃ ಏನಂ ವೇದ | ಆದ್ದರಿಂದಲೇ 'ನಿತ್ಯ' (ಎಂದು) ಯಾರು ಇವನನ್ನು (ಒಂದಂಶ ಬಿಡದೆ ಸರಿಯಾಗಿ) ಅರಿತಿದ್ದಾನೋ, |
| ಸಃಪುರುಷಃ, ಕಥಂ, ಕಂ, ಘಾತಯತಿ? | ಆ ವ್ಯಕ್ತಿಯು, ಹೇಗೆ, ಯಾರನ್ನು ಕೊಲ್ಲಿಸುತ್ತಾನೆ ? |
| ಕಥಂ, ಕಂ, ಹನ್ತಿ ? | ಹೇಗೆ, ಯಾರನ್ನು, ಕೊಲ್ಲುತ್ತಾನೆ ? |

(ಚೇತನನನ್ನು ಅಚೇತನ ಕೊಲ್ಲಲಾರದು, ಚೇತನನೂ ಕೊಲ್ಲಲಾರನು)

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನಿ ಅನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥**

| | |
|---|---|
| ಜೀರ್ಣಾನಿ ವಾಸಾಂಸಿವಿಹಾಯ | ಶಿಥಿಲವಾದ ವಸ್ತ್ರಗಳನ್ನು ತೊರೆದು |
| ನರಃ ಅಪರಾಣಿನವಾನಿ ಯಥಾ | ನರನು ಬೇರೆಯ ಹೊಸದಾದ ಬಟ್ಟೆಗಳನ್ನು ಹೇಗೆ |
| ಗೃಹ್ಣಾತಿ, ತಥಾ ಜೀರ್ಣಾನಿ ಶರೀರಾಣಿ | ಧರಿಸುತ್ತಾನೋ, ಹಾಗೆ ಶಿಥಿಲವಾದ ಶರೀರಗಳನ್ನು |
| ವಿಹಾಯ, ದೇಹೀ, ಅನ್ಯಾನಿ ನವಾನಿ | ತೊರೆದು, ಆತ್ಮನು ಬೇರೆಯ ಹೊಸದಾದ |
| ಸಂಯಾತಿ | ಶರೀರರಗಳನ್ನು ಹೋಗಿ ಸೇರುತ್ತಾನೆ ॥೨೨॥ |

(ಹೇ ದಿವ್ಯ ಚೇತನ! ಜೀರ್ಣವಾಗುವ ವಸ್ತ್ರಗಳಿಗೆ ಸಮನಾದ ಪ್ರಾಕೃತಶರೀರಗಳಲ್ಲೇಕೆ ನಿನಗೆ ವ್ಯಾಮೋಹ ? ದಿವ್ಯವಸ್ತ್ರಸಮಾನವಾದ ದಿವ್ಯಶರೀರಧರಿಸಿ ವಿಜೃಂಭಿಸು)

ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯನ್ತ್ಯಾಪೋ ನಶೋಷಯತಿ ಮಾರುತಃ ॥೨೩॥
ಅಚ್ಛೇದ್ಯೋಽಯ ಮದಾಹ್ಯೋಽಯಮ್ ಅಕ್ಲೇದ್ಯೋಽಶೋಷ್ಯ ಏವಚ।
ನಿತ್ಯಃ ಸರ್ವಗತಃ ಸ್ಥಾಣುಃ ಅಚಲೋಽಯಂ ಸನಾತನಃ ॥೨೪॥

| | |
|---|---|
| ಏನಂ ಶಸ್ತ್ರಾಣಿ ನ ಛಿನ್ದನ್ತಿ । | ಇವನನ್ನು ಶಸ್ತ್ರಗಳು ಛೇದಿಸುವುದಿಲ್ಲ । |
| ಏನಂ ಪಾವಕಃ ನ ದಹತಿ । | ಇವನನ್ನು ಬೆಂಕಿಯು ಸುಡುವುದಿಲ್ಲ । |
| ಏನಂ ಆಪಃ ಚ ನ ಕ್ಲೇದಯನ್ತಿ । | ಇವನನ್ನು ನೀರೂ ಕೂಡ ನೆನೆಸುವುದಿಲ್ಲ । |
| ಮಾರುತಃ ನ ಶೋಷಯತಿ । | ಗಾಳಿಯೂ ಒಣಗಿಸುವುದಿಲ್ಲ. |
| ಅಯಮ್ ಅಚ್ಛೇದ್ಯಃ । ಅಯಂ ಅದಾಹ್ಯಃ । ಅಕ್ಲೇದ್ಯಃ । ಅಶೋಷ್ಯಃ । ಏವಚ । | ಇವನು ಛೇದಕ್ಕೆ ಸಿಕ್ಕುವವನಲ್ಲ । ಇವನು ಸುಡುವುದಕ್ಕೆ ಸಿಕ್ಕುವವನಲ್ಲ । ನೆನೆಸಲ್ಪಡಲಾರ । ಶೋಷಿಸಲ್ಪಡಲಾರ । ಇದೆಲ್ಲ ನಿತ್ಯಸತ್ಯ । ಆದ್ದರಿಂದ |
| ನಿತ್ಯಃ । | ಎಂದಿಗೂ ಯಾವುದರಿಂದಲೂ, ನಾಶಹೊಂದತಕ್ಕವನಲ್ಲ ಕಾಲ, ಮೃತ್ಯುದೇವತೆ, ಯಾವುದೂ ಇವನಿಗೆ ಮಾರಕವಲ್ಲ. |
| ಸರ್ವಗತಃ । | ಈ ಜಡಪ್ರಪಂಚದಲ್ಲಿ ಎಲ್ಲದರಲ್ಲೂ ಪ್ರವೇಶಿರುವ ತತ್ವ ! |
| ಸ್ಥಾಣುಃ । ಅಚಲಃ । | ಸ್ಥಿರಸ್ವರೂಪನಾಗಿದ್ದಾನೆ, ದೇಹದಲ್ಲಿ ಅಪ್ರಕಂಪ್ಯನಾಗಿ, ತಾನೂ ಚಲಿಸದೆ ಒಂದೇ ಕಡೆ ಇರುತ್ತಾನೆ. । |

ಸನಾತನಃ। — ಅನಾದಿಕಾಲದಿಂದಲೂ ಭಗವಂತನಂತೆಯೇ ಇರುತ್ತಲೇ ಇದ್ದಾನೆ।

(ಸುರ-ನರ-ತಿರ್ಯಕ್ ಸ್ಥಾವರವೆಂಬ ಜಡಶರೀರಗಳಲ್ಲಿ ಪ್ರವೃತ್ತಿಯೂ ಅಸತ್ತ್ವವೂ ಕಂಡುಬರುವುದಕ್ಕೆ ಕಾರಣ ಅವುಗಳಲ್ಲೆಲ್ಲ ಹೊಕ್ಕಿರುವ ಆತ್ಮಗಳೇ; ಇವು ಸದಾ ನಾಶರಹಿತವಾದುವು।)॥೨೪॥

**ಅವ್ಯಕ್ತೋಽಯಮಚಿನ್ತ್ಯೋಽಯಮವಿಕಾರ್ಯೋಽಯಮುಚ್ಯತೇ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥೨೫॥**

ಅಯಂ ಅವ್ಯಕ್ತಃ, ಅಚಿಂತ್ಯಃ। — ಇವನು ಇಂದ್ರಿಯಗೋಚರನಲ್ಲ, ದೇಹದಂತೆ ಇತರ ಪ್ರಾಕೃತಗಳಂತೆ ಸ್ವಭಾವಲೇಶವನ್ನಾದರೂ ಉಳ್ಳವನೆಂದು ಚಿಂತಿಸಲ್ಪಡಲು ಅರ್ಹನಲ್ಲ,

ಅವಿಕಾರ್ಯಃ ಉಚ್ಯತೇ — (ಆದ್ದರಿಂದ) ವಿಕಾರಯೋಗ್ಯನಲ್ಲವೆಂದು ಹೇಳಲ್ಪಡುತ್ತಾನೆ।

ತಸ್ಮಾತ್ ಏನಂ ಏವಂ ವಿದಿತ್ವಾ — ಆದ್ದರಿಂದ ಇವನನ್ನು ಹೀಗೆಯೇ ತಿಳಿದುಕೊಂಡು

ಅನುಶೋಚಿತುಂ — (ಇವನ ಬಗ್ಗೆ) ಶೋಕಿಸಲು, ನೀನು

ನಾರ್ಹಸಿ। — ಅರ್ಹನಲ್ಲ ॥೨೫॥

(ಇಲ್ಲಿಯವರೆಗೂ ಆತ್ಮನಿಗಾಗಿ ಅಳಬೇಕಿಲ್ಲ ಎಂದು ಪ್ರತಿಪಾದಿತವಾಯಿತು)

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ! ನೈವಂ ಶೋಚಿತುಮರ್ಹಸಿ ॥೨೬॥**

| | |
|---|---|
| ಅಥಃ ನಿತ್ಯಜಾತಂ | ಇನ್ನು ಸರ್ವದಾಹುಟುವಂತಹುದು ಮತ್ತು |
| ನಿತ್ಯಮೃತಂ ವಾ ಏನಂ ಮನ್ಯಸೇ, | ಸರ್ವದಾ ಸಾಯುವಂತಹುದು ಆಗಿರುವುದನ್ನೇ (ಎಂದರೆ ದೇಹವನ್ನೇ) ಇವನನ್ನಾಗಿ (ಆತ್ಮವನ್ನಾಗಿ) ಭಾವಿಸುತ್ತೀಯೋ |
| ತಥಾಪಿ, ಹೇ ಮಹಾಬಾಹೋ। | ಹಾಗೂ ಕೂಡ ಎಲೈ ಮಹಾಬಾಹುವೇ ! |
| ತ್ವಂ ಏವಂ ಶೋಚಿತುಂ | ನೀನು ಇಷ್ಟೊಂದು ಶೋಕಿಸಲು |
| ನಾರ್ಹಸಿ | ಅರ್ಹನಾಗಿಲ್ಲ ॥೨೬॥ |

(ನಿತ್ಯವೂ ಹುಟ್ಟುವ ದೇಹವೆಷ್ಟೋ, ಸಾಯುವದೇಹವೆಷ್ಟೋ । ಪ್ರತಿ ದೇಹವೂ ಪ್ರತಿ ಕ್ಷಣವೂ ಸತ್ತು ಹುಟ್ಟುತ್ತಿರುತ್ತದೆ!)

**ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥**

| | |
|---|---|
| ಜಾತಸ್ಯ ಧ್ರುವೋ ಮೃತ್ಯುಃ । | ಉತ್ಪನ್ನವಾದುದಕ್ಕೆ ಅನಿವಾರ್ಯವಾಗಿದೆ ವಿನಾಶ । |
| ಹಿ। | ಇದು ಎಲ್ಲರಿಗೂ ಕಂಡುಬಂದಿರುವುದರಿಂದ ಪ್ರಸಿದ್ಧ। |

| | |
|---|---|
| ಚ ಮೃತಸ್ಯ ಜನ್ಮ | ಹಾಗೆಯೇ ವಿನಾಶವಾದದ್ದಕ್ಕೆ ಉತ್ಪತ್ತಿಯು |
| ಧ್ರುವಂ । ತಸ್ಮಾದ್ | ಅನಿವಾರ್ಯವಾಗಿದೆ। ಆದ್ದರಿಂದ |
| ಅಪರಿಹಾರ್ಯೇ ಅರ್ಥೇ | ಅನಿವಾರ್ಯವಾದ ವಿಷಯದಲ್ಲಿ |
| ತ್ವಂ ಶೋಚಿತುಂ ನಾರ್ಹಸಿ | ನೀನು ಶೋಕಿಸುವುದು ಸರಿಯಲ್ಲ |

(ಮಣ್ಣು→ಗಡಿಗೆ→ಒಡೆದ ಗಡಿಗೆ→ಚೂರು→ಪುಡಿ→ಮಣ್ಣು । ಹೀಗೆ ಯಾವುದೋ ವಸ್ತು→ದೇಹ → ಮತ್ತೆ ಯಾವುದೋ।)

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥**

| | |
|---|---|
| ಭೂತಾನಿ ಅವ್ಯಕ್ತಾದೀನಿ । | ಜೀವ ಜಂತುಗಳು ಅಗೋಚರವಾದ ಆದಿಯುಳ್ಳವು |
| ವ್ಯಕ್ತಮಧ್ಯಾನಿ । | ಗೋಚರವಾಗಿರುವ ಮಧ್ಯದೆಶೆ (ದೇಹದಶೆ) ಯುಳ್ಳವು |
| ಅವ್ಯಕ್ತ ನಿಧನಾನಿ ಏವ | ಅಗೋಚರವಾದ ಮರಣಾನಂತರ ದಶೆಯುಳ್ಳವು |
| ಭಾರತ ! ತತ್ರ | ಭರತಕುಲತಿಲಕನೇ! ಆ ವಿಷಯದಲ್ಲಿ |
| ಪರಿದೇವನಾಕಾ ? | ಅಳುವುದೇನಿದೆ ? ॥೨೮॥ |

(ಏನೇನೆಲ್ಲ ಸೇರಿ ದೇಹ ಹುಟ್ಟಿತು ಗೊತ್ತಿಲ್ಲ। ದೇಹದ ಆಕಾರ ಕಣ್ಣಿಗೆ ಸಲ್ಪಕಾಲಗೋಚರ । ಕೊನೆಗೆ ಬೂದಿಯೋ, ಮಣ್ಣೋ । ನಾಸ್ತಿಕನೂ ಇದಕ್ಕಾಗಿ ಅಳುವುದಿಲ್ಲ ।

(ಇಲ್ಲಿಯವರೆಗೂ ದೇಹಕ್ಕಾಗಿ ಅಳಬೇಕಿಲ್ಲ ಎಂದು ಪ್ರತಿಪಾದಿತವಾಯಿತು)

ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಮ್ ಆಶ್ಚರ್ಯವದ್ ವದತಿ ತಥೈವ ಚಾನ್ಯಃ
ಆಶ್ಚರ್ಯವಚ್ಚೈನಮ್+ಅನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನಚೈವ ಕಶ್ಚಿತ್ ॥೨೯॥

| | |
|---|---|
| ಆಶ್ಚರ್ಯವತ್ ಏನಂ | ಆಶ್ಚರ್ಯಕರವಸ್ತು ಏನಂತೆ ಇರುತ್ತಿರುವ ಇವನನ್ನು (ದೇಹಾತಿರಿಕ್ತ ಆತ್ಮನನ್ನು) |
| ಕಶ್ಚಿತ್ ಪಶ್ಯತಿ। ಚ | ಅನಂತ ಜಂತುಗಳಲ್ಲಿ ಯಾವಾತನೋ ಒಬ್ಬನು ಕಾಣುತ್ತಾನೆ। ಮತ್ತು |
| ತಥೈವ ಅನ್ಯಃ | ಅಂತಹವನೇ ಯಾರೋ ಮತ್ತೊಬ್ಬನು |
| ಆಶ್ಚರ್ಯವತ್ ಏನಂ | ಆಶ್ಚರ್ಯದಂತಿರುವ ಇವನನ್ನು (ಕುರಿತು) |
| ವದತಿ। ಚ ಅನ್ಯಃ | ಮತ್ತೊಬ್ಬರಿಗೆ ಹೇಳುತ್ತಾನೆ। ಮತ್ತು (ಅಂತಹ) ಇನ್ನಾರೋ ಒಬ್ಬನು |
| ಆಶ್ಚರ್ಯವತ್ ಏನಂ | ಆಶ್ಚರ್ಯವಂತಿರುವ ಇವನನ್ನು ಕುರಿತು |
| ಶೃಣೋತಿ। | ಶ್ರವಣ ಮಾಡುತ್ತಾನೆ। |
| ಶ್ರುತ್ವಾಪಿ ಏನಂ | ಶ್ರವಣ ಮಾಡಿಯೂ ಕೂಡ ಇವನನ್ನು ಕುರಿತು |
| ಕಶ್ಚಿತ್ ನ ವೇದ। | ಯಾವ ವ್ಯಕ್ತಿಯೂ ಪೂರ್ಣ ಯಥಾವತ್ತಾಗಿ ತಿಳಿದಿಲ್ಲ। |
| ಚ ಏವ। | ಹಾಗೆ ನೋಡಿದವರೂ ಹೇಳಿದವರೂ ಕೂಡ ಪೂರ್ಣ ಯಥಾವತ್ತಾಗಿ ನೋಡಿಲ್ಲ। ಹೇಳಿಲ್ಲ ॥೨೯॥ |

(ದೇಹದ, ಹಾಗೆ ಮಾಯದಿಂದ ಬಂದು ಬೆಳೆದು ಕಾಣಿಸಿಕೊಂಡು ಕೈಗೆ ಸಿಕ್ಕಿ ಮಾಯವಾಗಿ ಹೋಗಿ ಬಿಡುವಂತಹುದಲ್ಲ ಆತ್ಮ। ಪರಮಾದ್ಭುತ ಮಹಿಮೆಯುಳ್ಳದ್ದು ಆತ್ಮ। ಅದನ್ನು ತಿಳಿಯುವವನೇ ಭಾಗ್ಯಶಾಲಿ)

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ !**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥**

ಭಾರತ ! ಸರ್ವಸ್ಯ ದೇಹೇ — ಭರತಕುಲತಿಲಕನೇ! ದೇವಾದಿ ಯಾವುದೇ ವರ್ಗದವರ ದೇಹವು (ವಧಿಸಲ್ಪಡುತ್ತಿದ್ದರೂ)

ದೇಹೀ ಅಯಂ ನಿತ್ಯಂ — ಆ ದೇಹದೊಡೆಯನಾದ ಈ ಆತ್ಮನು ಯಾವುದೇ ಕಾಲದಲ್ಲೂ

ಅವಧ್ಯಃ ! ತಸ್ಮಾತ್ — ವಧೆಕ್ಕೆ ಸಿಕ್ಕುವವನಲ್ಲ! ಆದ್ದರಿಂದ

ಸರ್ವಾಣಿ ಭೂತಾನಿ — ದೇವ-ಮನುಷ್ಯ-ತಿರ್ಯಕ್-ಸ್ಥಾವರವೆಂಬ ಯಾವುದೇ ಜೀವಜಂತುವನ್ನು ಕುರಿತು

ತ್ವಂ ಶೋಚಿತುಂ ನ ಅರ್ಹಸಿ — ನೀನು ಶೋಕಿಸುವುದು ಸರಿಯಲ್ಲ ॥೩೦॥

(ಇಂತಹ ಅದ್ಭುತ ವಸ್ತುವಾದ ಆತ್ಮಾ ಈ ದೇಹವೆಂಬ ಪ್ರತಿಯೊಂದು ಸಾಯುವ ವಸ್ತುವಿನಲ್ಲೂ ಇದೆ ಅದಕ್ಕೋಸ್ಕರವೇ ಇಲ್ಲಿ ಅಳುವ ಕಾರಣವಿಲ್ಲ. ಅದನ್ನು ಸರಿಯಾಗಿ ತಿಳಿದು ಆನಂದಪಡುವ ಕಾರಣವೇ ಇದೆ))

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥೩೧॥**

ಅಪಿಚ — ಅಷ್ಟೇ ಅಲ್ಲದೆ

ಸ್ವಧರ್ಮಮ್ ಅವೇಕ್ಷ್ಯ — ಸ್ವಧರ್ಮವಾದ ಕ್ಷತ್ರಿಯ ಧರ್ಮವನ್ನು ನೋಡಿ

ವಿಕಮ್ಪಿತುಂ ನಾರ್ಹಸಿ ।ಹಿ — ನೀನು ವಿಚಲಿತವಾಗುವುದು ಸರಿಯಲ್ಲ । ಏಕೆಂದರೆ
ಧರ್ಮ್ಯಾತ್ ಯುದ್ಧಾತ್ — ನ್ಯಾಯವಾಗಿ ಬಂದೊದಗಿರುವ ಯುದ್ಧಕ್ಕಿಂತಲೂ
ಅನ್ಯತ್ ಶ್ರೇಯಃ — ಮತ್ತೊಂದು ಶ್ರೇಯಸ್ಕರ ಮಾರ್ಗವು
ಕ್ಷತ್ರಿಯಸ್ಯನ ವಿದ್ಯತೇ — ಕ್ಷತ್ರಿಯನಿಗೆ ಇರುವುದಿಲ್ಲ !! ।.೩೧॥

(ಧರ್ಮದ ಬಗ್ಗೆ ಸಂಭ್ರಾಂತಿ ಬೇಕಿಲ್ಲ । ಸ್ವಧರ್ಮಕ್ಕಿಂತ ಬೇರೆ ಶ್ರೇಯೋ ಮಾರ್ಗ ಹುಡುಕಬೇಕಿಲ್ಲ ।)

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ! ಲಭನ್ತೇ ಯುದ್ಧ ಮೀದೃಶಮ್ ॥೩೨॥**

ಯದೃಚ್ಛಯಾ ಉಪಪನ್ನಂ — ಅಕಸ್ಮಾತ್ತನೆ ಬಂದೊದಗಿರುವ
ಅಪಾವೃತಂ ಸ್ವರ್ಗದ್ವಾರಂ — ಪೂರ್ಣ ತೆರೆದ ಸ್ವರ್ಗದ್ವಾರವಾಗಿರುವ (ಎಂದರೆ ನಿರ್ವಿಘ್ನ ಮೋಕ್ಷೋಪಾಯವಾಗಿರುವ)
ಈದೃಶಂ ಯುದ್ಧಮ್ — ಇಂತಹ ಯುದ್ಧವನ್ನು
ಸುಖಿನಃ ಕ್ಷತ್ರಿಯಾಃ ಲಭನ್ತೇ — ಭಾಗ್ಯಶಾಲಿಗಳಾದ ಕ್ಷತ್ರಿಯರು ಪಡೆಯುತ್ತಾರೆ

(ಪರಮಶ್ರೇಯಸ್ಸಿಗೆ ತಾನಾಗಿಯೇ ಒದಗಿಬಂದಿರುವ ಮಹಾವಕಾಶವಿದು ಭಾಗ್ಯಶಾಲಿ ಕ್ಷತ್ರಿಯರಿಗೆ।)

**ಅಥಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

ಅಥ ತ್ವಂ ಧರ್ಮ್ಯಮ್ ಇಮಂ — ಆದರೆ ನೀನು ಧರ್ಮಬದ್ಧವಾದ ಈ
ಸಂಗ್ರಾಮಂ ನಕರಿಷ್ಯಸಿ ಚೇತ್ — ಯುದ್ಧವನ್ನು ಮಾಡದೇ ಹೋದರೆ
ತತಃ ಸ್ವಧರ್ಮಂ ಕೀರ್ತಿಂಚ — ಆಗ ಸ್ವಧರ್ಮಫಲವಾದ ಸ್ವರ್ಗವನ್ನು (ಇಹಲೋಕದಲ್ಲಿ) ಕೀರ್ತಿಯನ್ನು
ಹಿತ್ವಾ ಪಾಪಮವಾಪ್ಸ್ಯಸಿ (ಚ) — ಕಳೆದುಕೊಂಡು ಪಾಪವನ್ನು ಹೊಂದುತ್ತೀಯೆ ಕೂಡ

( ಇದನ್ನು ಅಜ್ಞಾನದಿಂದ ಬಿಟ್ಟರೆ (೧) ಶ್ರೇಯೋಹಾನಿ (೨) ಕೀರ್ತಿ ಹಾನಿ (೩) ಪಾಪಲೇಪ)

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಮ್**
**ಸಂಭಾವಿತಸ್ಯ ಚಾ ಕೀರ್ತಿರ್ ಮರಣಾದತಿರಿಚ್ಯತೇ ॥೩೪॥**

ಅಪಿ ಚ, ಭೂತಾನಿ ತೇ ಅವ್ಯಯಾಂ — ಅಷ್ಟೇ ಅಲ್ಲದೆ, ಎಲ್ಲ ಜನರೂ ನಿನ್ನ ಬಗ್ಗೆ ಅಳಿಯದಂತಹ
ಅಕೀರ್ತಿಂ ಕಥಯಿಷ್ಯಂತಿ — ಅಪಕೀರ್ತಿಯನ್ನು ಹೇಳುತ್ತಿರುತ್ತಾರೆ ।
ಸಂಭಾವಿತಸ್ಯ ಚ ಅಕೀರ್ತಿಃ — ಗೌರವ್ಯನಾದವನಿಗಾದರೋ ಅಪಕೀರ್ತಿಯು
ಮರಣಾದ್ ಅತಿರಿಚ್ಯತೇ — ಮರಣಕ್ಕಿಂತಲೂ ತೀವ್ರವಾಗಿರುತ್ತದೆ.

((೪) ಅಪಕೀರ್ತಿ ವಜ್ರಲೇಪ)

**ಭಯಾದ್‌ರಣಾದುಪರತಂ ಮಂಸ್ಯನ್ತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥೩೫॥**

| | |
|---|---|
| ಚ, ಯೇಷಾಂ ತ್ವಂ ಬಹುಮತಃ | ಮತ್ತು ಯಾರಿಗೆ ನೀನು ಮಹಾನ್ ಎಂದು ಗಣ್ಯನಾಗಿ, |
| ಭೂತ್ವಾ, ಲಾಘವಂ ಯಾಸ್ಯಸಿ. | ಹಿಂದೆ ಆಗಿಬಿಟ್ಟು, ಈಗ ಹಗುರವಾಗಿ ಬಿಡುವೆಯೋ, |
| ತೇ ಮಹಾರಥಾಃ ತ್ವಾಂ | (ಕರ್ಣ ದುರ್ಯೋಧನಾದಿ) ಆ ಮಹಾರಥರು ನಿನ್ನನ್ನು |
| ಭಯಾದ್ ರಣಾದ್ | ಭಯದ ಕಾರಣದಿಂದಲೇ ಯುದ್ಧದಿಂದ |
| ಉಪರತಂ ಮಂಸ್ಯನ್ತೇ | ನಿವೃತ್ತನಾದವನನ್ನಾಗಿ ಭಾವಿಸುತ್ತಾರೆ!! ॥೩೫॥ |

((೩೫) ವೀರರಾದ ಶತ್ರುಗಳ ಕಣ್ಣಲ್ಲಿ ನೀನು ಹೇಡಿ!)

**ಅವಾಚ್ಯವಾದಾಂಶ್ಚ ಬಹೂನ್, ವದಿಷ್ಯಂತಿ ತವಾಹಿತಾಃ ।**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನುಕಿಮ್ ॥೩೬॥**

| | |
|---|---|
| ತವ ಅಹಿತಾಃ ತವ ಸಾಮರ್ಥ್ಯಂ | ನಿನ್ನ ಶತ್ರುಗಳು ನಿನ್ನ ಸಾಮರ್ಥ್ಯವನ್ನು |
| ನಿಂದನ್ತಃ, ಬಹೂನ್ | ಅಲ್ಲಗಳೆಯುತ್ತಾ, ಅನೇಕ ವಿಧವಾದ |
| ಅವಾಚ್ಯವಾದಾನ್ ವದಿಷ್ಯಂತಿ! | ಅವಾಚ್ಯ ವಚನಗಳನ್ನು ಹೇಳುತ್ತಾರೆ |
| ತತೋ ದುಃಖತರಂನು ಕಿಮ್ | ಅದಕ್ಕಿಂತ ಹೆಚ್ಚು ದುಃಖ ಯಾವುದು ತಾನೇ ಉಂಟು ? |

((೩೬) ಅವಕಾಶ ಸಿಕ್ಕಿತೆಂದು ಅವಾಚ್ಯವಚನದ ಮಳೆಗರೆಯುತ್ತಾರೆ ಶತ್ರುಗಳು)

**ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌನ್ತೇಯ! ಯುದ್ಧಾಯ ಕೃತನಿಶ್ಚಯಃ ॥೩೭॥**

| | |
|---|---|
| ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ | ಕೊಲ್ಲಲ್ಪಡುವೆಯಾದರೆ ಪರಮ ನಿಶ್ರೇಯಸವನ್ನು ಪಡೆಯುವೆ. |
| ಜಿತ್ವಾವಾ ಭೋಕ್ಷ್ಯಸೇ ಮಹೀಮ್ | (ಶತ್ರುಗಳನ್ನು) ಕೊಂದಾದರೂ ಭೂಮಂಡಲವನ್ನು ಅನುಭವಿಸುವೆ (ಕರ್ಮಯೋಗಿಯಾಗಿ) |
| ತಸ್ಮಾದ್ | ಆದ್ದರಿಂದ |
| ಕೃತನಿಶ್ಚಯಃ | ವ್ಯವಸಾಯಾತ್ಮಿಕಾ ಬುದ್ಧಿಯನ್ನು ಸಂಪಾದಿಸಿದವನಾಗಿ |
| ಕೌನ್ತೇಯ ಯುದ್ಧಾಯ ಉತ್ತಿಷ್ಠ | ಕೌನ್ತೇಯ! ಯುದ್ಧಕ್ಕಾಗಿ ಎದ್ದುನಿಲ್ಲು ॥೩೭॥ |

(ಯುದ್ಧದಲ್ಲಿ ಸತ್ತರೂ ಗೆದ್ದರೂ ಶ್ರೇಯಸ್ಸಿಗೆ ಯಾವ ಹಾನಿಯೂ ಇಲ್ಲ)

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥**

| | |
|---|---|
| ಸುಖ-ದುಃಖೇ ಲಾಭ-ಅಲಾಭೌ, ಜಯ-ಅಜಯೌ ಸಮೇಕೃತ್ವಾ | ಸುಖ-ದುಃಖಗಳೆರಡನ್ನೂ, ಲಾಭ ಹಾನಿಗಳೆರಡನ್ನೂ ಜಯಾಪಜಯಗಳೆರಡನ್ನೂ ಸಮವೆಂದು ಮನಸ್ಸಿನಲ್ಲಿ ಮಾಡಿಕೊಂಡು |

Funding: Tattva Heritage Foundation,Kolkata. Digitization: eGangotri.

| | |
|---|---|
| ತತಃ ಯುದ್ಧಾಯ ಯುಜ್ಯಸ್ವ। ಏವಂ ಪಾಪಂ ನ ಅವಾಪ್ಸ್ಯಸಿ | ಅನಂತರ ಯುದ್ಧಕ್ಕೆ ಉದ್ಯುಕ್ತನಾಗು। ಹೀಗಾದರೆ ನೀನು ಪಾಪವನ್ನು ಹೊಂದುವುದಿಲ್ಲ ! |

(ಯುದ್ಧದಲ್ಲಿ, ಹಾಗೂ ಜೀವನದಲ್ಲಿ, ಪಾಪ ಬರದಂತೆ ಕರ್ತವ್ಯ ಮಾಡುವ ರಹಸ್ಯ ಸಮಚಿತ್ತತ್ವ)
(ಇಲ್ಲಿಯವರೆಗೂ ಸ್ವಧರ್ಮಾಚರಣೆಯಿಂದ ಪಾಪ ಪುಣ್ಯಲೇಪವಾಗದಿರುವುದು ಹೇಗೆ? ಎಂಬುದನ್ನು ಹೇಳಲಾಯಿತು)

**ಏಷಾತೇಽಭಿಹಿತಾ ಸಾಂಖ್ಯೇ ಬುದ್ಧಿಃ, ಯೋಗೇತ್ವಿಮಾಂ ಶೃಣು।**
**ಬುದ್ಧ್ಯಾಯುಕ್ತೋ ಯಯಾ ಪಾರ್ಥ ! ಕರ್ಮಬಂಧಂ ಪ್ರಹಾಸ್ಯಸಿ ॥೩೯॥**

| | |
|---|---|
| ಸಾಂಖ್ಯೇ ಬುದ್ಧಿಃ, ಏಷಾ ತೇ ಅಭಿಹಿತಾ | ಆತ್ಮತತ್ವದ ವಿಷಯದಲ್ಲಿ (ಯಾ) ಯಾವ ಬುದ್ಧಿ ನಿರ್ಣಯ--ಇರಬೇಕೋ, ಇದು ನಿನಗೆ (ಆಗಲೇ) ಹೇಳಲ್ಪಟ್ಟಿದೆ. |
| ಯೋಗೇತು ಇಮಾಂ | ಕರ್ಮಯೋಗದಲ್ಲಾದರೋ ಇರಬೇಕಾದ ಇದನ್ನು ಶೃಣು। (ಬುದ್ಧಿ ನಿರ್ಣಯವನ್ನು) ಕೇಳು (ಈಗ) । |
| ಪಾರ್ಥ ! ಯಯಾ ಬುದ್ಧ್ಯಾಯುಕ್ತಃ | ಪೃಥಾಸುತನೇ! ಯಾವ ಕರ್ಮಯೋಗಾನು ರೂಪ ಬುದ್ಧಿಯಿಂದ ಯುಕ್ತನಾದ(ರೆ) ನೀನು |
| ಕರ್ಮಬಂಧ | (ಸಂಸಾರಬಂಧವನ್ನು) ಪಾಪಪುಣ್ಯ ಕರ್ಮಬಂಧವನ್ನೆಲ್ಲ |
| ಪ್ರಹಾಸ್ಯಸಿ | ಸಂಪೂರ್ಣವಾಗಿ (ಮುಂದೆ) ಕಳೆದುಕೊಳ್ಳುವೆ । |

(ಆತ್ಮ ಜ್ಞಾನ ನಿಶ್ಚಯವಿದ್ದಾಗಲೇ ಮೇಲಿನ ಸಮಬುದ್ಧಿ ಬರುವುದು । ಇದಲ್ಲದೆ ಕರ್ಮಾಚರಣೆಯಲ್ಲಿ ಯೋಗ ಬುದ್ಧಿ ಬಂದು ಬಿಟ್ಟರೆ ನಿನ್ನ ಪಾಪಪುಣ್ಯ ಬಂಧನವೇ ಇರುವುದಿಲ್ಲ)

(ಕರ್ಮಯೋಗದ ಮಹತ್ತ್ವ)

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

ಇಹ ಅಭಿಕ್ರಮನಾಶಃ ನಾಸ್ತಿ — ಈ ಕರ್ಮಯೋಗದಲ್ಲಿ ಅಭಿನಿವೇಶದಿಂದ ಉಪಕ್ರಮಿಸಿದ್ದರ ನಾಶವಿಲ್ಲ ।

ಪ್ರತ್ಯವಾಯಃ ನ ವಿದ್ಯತೇ — ವಿಚ್ಛೇದದಿಂದ ಉಂಟಾಗುವ ಪಾಪವಿಲ್ಲ ।

ಅಸ್ಯ ಧರ್ಮಸ್ಯ ಸ್ವಲ್ಪಮಪಿ — ಈ ಕರ್ಮಯೋಗದ ಸಣ್ಣ ಅಂಶವೂ ಕೂಡ

ಮಹತೋ ಭಯಾತ್ ತ್ರಾಯತೇ — ಸಂಸಾರ ರೂಪ ಮಹಾಭಯದಿಂದ ಕಾಪಾಡುತ್ತದೆ ।

(ವ್ರತಗಳು ಯಾಗಾದಿಗಳು ಪ್ರಾರಂಭಿಸಿ ಕೈಬಿಟ್ಟರೆ ಮೊದಲಿನಿಂದ ಆರಂಭಿಸಬೇಕು । ಸಂಧ್ಯಾವಂದನಾದಿ ಮಾಡದಿದ್ದರೆ ಪ್ರತ್ಯವಾಯ। ಅವುಗಳಿಂದ ಸಂಸಾರ ವಿಮೋಚನೆ ಇಲ್ಲ। ಈ ಮೂರಕ್ಕೂ ವಿರುದ್ಧಗುಣ ಕರ್ಮಯೋಗದ್ದು )

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ ।**
**ಬಹುಶಾಖಾಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥**

ಇಹ ವ್ಯವಸಾಯಾತ್ಮಿಕಾ ಬುದ್ಧಿಃ — ಈ ಕರ್ಮಯೋಗದಲ್ಲಿ ಆತ್ಮಯಾಥಾತ್ಮ್ಯ ನಿಶ್ಚಯರೂಪವಾದ ಬುದ್ಧಿಯು

| | |
|---|---|
| ಏಕಾ । ಅವ್ಯವಸಾಯಿನಾಂ(ತು) | ಒಂದೇ ಒಂದು (ಇರುತ್ತದೆ) । ಆತ್ಮ ಯಾಥಾತ್ಮ್ಯದ ನಿಶ್ಚಯವಿಲ್ಲದವರಿಗಾದರೋ |
| ಅನನ್ತಾಃ, ಬಹುಶಾಖಾಃ | ಅನನ್ತ ವೈವಿಧ್ಯವುಳ್ಳ, ಒಂದೊಂದು ವಿಧದಲ್ಲೂ ಬಹಳ ಶಾಖೆಗಳುಳ್ಳ, |
| ಬುದ್ಧಯಃ | ಬುದ್ಧಿಗಳು (ಚಂಚಲ ಅಸಂಖ್ಯೇಯ ಬುದ್ಧಿಗಳೆಂದು ಭಾವ)॥೪೧॥ |

(ತನ್ನ ಶುದ್ಧಾತ್ಮರೂಪ ಸಾಕ್ಷಾತ್ಕಾರ ಒಂದೇಗುರಿ ಕರ್ಮಯೋಗಿಗೆ,। ಇತರ ಸಾವಿರಾರು ಫಲಾಪೇಕ್ಷೆಯಿಂದ ಸಾವಿರಾರು ಬುದ್ಧಿ ಲೌಕಿಕರಿಗೆ)

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ॥೪೨॥**
**ಕಾಮಾತ್ಮಾನಃ ಸ್ವರ್ಗಪರಾಃ ಜನ್ಮಕರ್ಮಫಲಪ್ರದಾಂ।**
**ಕ್ರಿಯಾ ವಿಶೇಷ ಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥**
**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತ ಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥**

| | |
|---|---|
| ವೇದ ವಾದರತಾಃ | ವೇದೋಕ್ತ ಸ್ವರ್ಗಾದಿಫಲವಾದಗಳಲ್ಲಿ ನಿರತರಾದ |
| ನಾನ್ಯದಸ್ತೀತಿವಾದಿನಃ | ಸ್ವರ್ಗಭೋಗಕ್ಕಿಂತ ಬೇರೆ ಇಲ್ಲವೆಂದು ವಾದಿಸುವವರಾದ |

| | |
|---|---|
| ಕಾಮಾತ್ಮಾನಃ | ಕಾಮ ಮಗ್ನ ಮನಸ್ಕರಾದ |
| ಸ್ವರ್ಗಪರಾಃ | ಸ್ವರ್ಗವನ್ನೇ ಪರಮಪುರುಷಾರ್ಥವೆಂದುಕೊಳ್ಳುವವರಾದ |
| ಅವಿಪಶ್ಚಿತಃ | ಅಲ್ಪಜ್ಞರು |
| ಜನ್ಮ ಕರ್ಮಫಲಪ್ರದಾಂ | ಜನ್ಮ-ಕರ್ಮಗಳನ್ನು ಫಲವಾಗಿ ಉಂಟುಮಾಡುವಂತಹ |
| ಕ್ರಿಯಾವಿಶೇಷ ಬಹುಲಾಂ | ಅಸಾಧಾರಣ ಕ್ರಿಯಾ ಕಲಾಪಗಳಿಂದ ತುಂಬಿರುವಂತಹ |
| ಭೋಗೈಶ್ವರ್ಯಗತಿಂ ಪ್ರತಿ | ಭೋಗ-ಐಶ್ವರ್ಯಗಳ ಸಾಧನೆಯ ಬಗ್ಗೆ ಇರುವಂತಹ, |
| ಯಾಂ ಇಮಾಂ | ಯಾವ ಇಂತಹ (ಎಂದರೆ ಪ್ರಾಕೃತ ಭೋಗ-ಐಶ್ವರ್ಯ ಪ್ರಧಾನವಾದಂತಹ) |
| ಪುಷ್ಪಿತಾಂ ವಾಚಂ ಪ್ರವದಂತಿ | ಹೂವಿನಂತಹ (ಫಲವಿಲ್ಲದಂತಹ) ಮಾತನ್ನು ಪ್ರವಚನ ಮಾಡುತ್ತಾರೋ |
| ತಯಾ ಅಪಹೃತ ಚೇತಸಾಂ | ಅಂತಹ ಮಾತಿನಿಂದಲೇ ಬುದ್ಧಿ ಕಳೆದುಕೊಂಡಿರುವವರಾದ |
| ಭೋಗೈಶ್ವರ್ಯ ಪ್ರಸಕ್ತಾನಾಂ | ಕಾಮಭೋಗದಲ್ಲೂ ಅರ್ಥ ಪುರುಷಾರ್ಥದಲ್ಲೂ ಅಂಟಿಕೊಂಡಿರುವ ಅವರಿಗೆ |
| ವ್ಯವಸಾಯಾತ್ಮಿಕಾ ಬುದ್ಧಿಃ, ಸಮಾಧೌ | ಆತ್ಮ ಯಾಥಾತ್ಮ್ಯ ನಿಶ್ಚಯಾತ್ಮಕವಾದ ಬುದ್ಧಿಯು, ಸಮಾಧಾನವಾದ ಚಿತ್ತದಲ್ಲಿ |
| ನ ವಿಧೀಯತೇ | (ಉಪದೇಶಗಳಿಂದಾಗಲೀ ವಾದಗಳಿಂದಾಗಲಿ) ಕೂರಿಸಲ್ಪಡಲಾಗುವುದಿಲ್ಲ. |

(ಕಾಮಭೋಗ-ಧನಧಾನ್ಯ-ಸ್ಥಾನಮಾನಾದಿ ಐಶ್ವರ್ಯ -ಇದಕ್ಕಾಗಿ ಪುಣ್ಯ ಕರ್ಮ ಇವುಗಳನ್ನೇ ಜೀವನದ ಸಾರವಾಗಿ ಭಾವಿಸುವವರಿಗೆ ಜನ್ಮ ಮರಣ ತಪ್ಪಿದಲ್ಲ। ಸ್ವಸ್ವರೂಪ ವಿಷಯ, ಅಮೃತತ್ತ್ವ, ಅವರಿಗೆ ಬೇಕಿಲ್ಲ)

**ತ್ರೈಗುಣ್ಯ ವಿಷಯಾ ವೇದಾಃ ನಿಸ್ತ್ರೈಗುಣ್ಯೋ ಭವಾರ್ಜುನ!**
**ನಿರ್ದ್ವಂದ್ವೋ ನಿತ್ಯ ಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥೪೫॥**

| | |
|---|---|
| ತ್ರೈಗುಣ್ಯ ವಿಷಯಾವೇದಾಃ, ಅರ್ಜುನ। | ವೇದಗಳು ಮೂರು ಗುಣದವರನ್ನೂ ಉದ್ದೇಶಿಸಿವೆ, ಅರ್ಜುನ! |
| ನಿಸ್ತ್ರೈಗುಣ್ಯೋ ಭವ। | ಮೂರು ಗುಣಸಾಂಕರ್ಯವಿಲ್ಲದವನಾಗು । |
| ನಿರ್ದ್ವನ್ದ್ವಃ | ದ್ವಂದ್ವರಹಿತನಾಗು । |
| ನಿತ್ಯಸತ್ತ್ವಸ್ಥಃ। | ನಿತ್ಯ ಪ್ರವರ್ಧಮಾನ ಸತ್ವ ಗುಣಶಾಲಿಯಾಗು । (ರಜಸ್ತಮೋವೃದ್ಧಿಯಿಲ್ಲದವನಾಗು) |
| ನಿರ್ಯೋಗಕ್ಷೇಮಃ। | ಲೌಕಿಕ ಪ್ರಯೋಜನಗಳ ಪ್ರಾಪ್ತಿ ಮತ್ತು ರಕ್ಷಣೆಯ ಚಿಂತೆಯನ್ನು ಪರಿತ್ಯಜಿಸು । |
| ಆತ್ಮವಾನ್ ಭವ | ಆತ್ಮ ಸ್ವರೂಪಾನ್ವೇಷಣಪರನಾಗು ॥೪೫॥ |

(ವೇದಗಳು ತಾಮಸಿ - ರಾಜಸಿಗಳಿಗೂ ಇಷ್ಟವಾದ ಮಾರ್ಗ ತೋರುತ್ತವೆ । ಅದನ್ನು ಬಿಡು। ಸಾತ್ತ್ವಿಕ ಮಾರ್ಗ ಮಾತ್ರಹಿಡಿ । ಅನಿತ್ಯ ಬಿಟ್ಟು 'ನಿತ್ಯ'ನಲ್ಲಿ ನಿರತನಾಗು)

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

| | |
|---|---|
| ಸರ್ವತಃ ಸಂಪ್ಲುತೋದಕೇ ಉದಪಾನೇ | ಎಲ್ಲ ಕಡೆ ತುಂಬಿ ತುಳುಕುತ್ತಿರುವ ಸರೋವರದಲ್ಲಿ |
| ಯಾವಾನ್ ಅರ್ಥಃ ತಾವಾನ್ | ಎಷ್ಟು ತನಗೆ ಪ್ರಯೋಜನವೋ ಅಷ್ಟೇ |
| ಸರ್ವೇಷು ವೇದೇಷು, ಬ್ರಾಹ್ಮಣಸ್ಯ, | ಅನಂತವಾದ ವೇದಗಳಲ್ಲಿ, ವೇದಶಾಸ್ತ್ರಾನುಸಾರ ಅನುಷ್ಠಾನ ಶೀಲನಾದ, |
| ವಿಜಾನತಃ, ಅರ್ಥಃ | ವಿಶೇಶ ಜ್ಞಾನವುಳ್ಳವನಿಗೆ ಎಂದರೆ ಮುಮುಕ್ಷುವಿಗೆ, ಪ್ರಯೋಜನವು । |

(ಮುಮುಕ್ಷುವಿಗೆ ಬೇಕಾದ ನಿತ್ಯವಸ್ತುವಿನ ಜ್ಞಾನ ಮಾತ್ರ ವೇದಗಳಿಂದ ತೆಗೆದುಕೊಳ್ಳಬೇಕು)

**ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ ।**
**ಮಾಕರ್ಮಫಲಹೇತುರ್ಭೂಃ ಮಾತೇ ಸಂಗೋಽಸ್ತ್ವಕರ್ಮಣಿ ॥ ೪೭ ॥**

| | |
|---|---|
| ಕರ್ಮಣಿ ಏವ ತೇ ಅಧಿಕಾರಃ । | ಕರ್ತವ್ಯ ಮಾತ್ರದಲ್ಲೇ ನಿನಗೆ ಬಾಧ್ಯತೆ। |
| ಫಲೇಷು ಮಾ ಕದಾಚನ ಅಧಿಕಾರಃ । | ಫಲಗಳಲ್ಲಿ (ಕರ್ತವ್ಯದ ಫಲಗಳಲ್ಲಿ) ಯಾವಾಗಲೂ ಹಕ್ಕು ಇಲ್ಲ |
| ಕರ್ಮ-ಫಲ-ಹೇತುಃ ಮಾ ಭೂಃ । ತೇ | ಕರ್ಮಕ್ಕಾಗಲಿ, ಅದರ ಫಲಕ್ಕಾಗಲಿ, ನಾನು ಕಾರಣ ಎಂದು-ಎಂದೂ ಅಂದುಕೊಳ್ಳಬೇಡ । ನಿನಗೆ |

| | |
|---|---|
| ಅಕರ್ಮಣಿ | ಅನುಷ್ಠಾನ ಮಾಡದಿರುವಿಕೆಯಲ್ಲಿ (ಕೃತ್ಯಅಕರಣ-ಅಕೃತ್ಯ ಕರಣಗಳಲ್ಲಿ) |
| ಸಂಗಃ ಮಾಸ್ತು | ಸಂಗವು ಎಂದಿಗೂ ಇರಬಾರದು । ॥೪೭॥ |

(ಶಾಸ್ತ್ರೀಯ ನಿತ್ಯನೈಮಿತ್ತಿಕ ಕರ್ಮ ಮಾಡಲೇಬೇಕು । ಕಾಮ್ಯ ಕರ್ಮಗಳ ಫಲಸಂಗಬಿಡಬೇಕು । ಎಲ್ಲ ಕರ್ಮಗಳಲ್ಲಿ ಕರ್ತೃತ್ವಸಂಗ ಮಮತೆ ಎರಡನ್ನೂ ಬಿಡಬೇಕು )

**ಯೋಗಸ್ಥಃ ಕುರುಕರ್ಮಾಣಿ ಸಙ್ಗಂತ್ಯಕ್ತ್ವಾ ಧನಞ್ಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ ॥೪೮॥**

| | |
|---|---|
| ಧನಂಜಯ ! ಸಂಗಂತ್ಯಕ್ತ್ವಾ ಕರ್ಮಾಣಿ | ಅರ್ಜುನ ! ಸಂಗವನ್ನು ತ್ಯಜಿಸಿ ಕರ್ತವ್ಯಗಳನ್ನು |
| ಯೋಗಸ್ಥಃ ಕುರು । | ಯೋಗದಲ್ಲಿದ್ದುಕೊಂಡು ಮಾಡು । |
| ಸಿದ್ಧಿ+ಅಸಿದ್ಧ್ಯೋಃ ಸಮಃಭೂತ್ವಾ । | ಸಿದ್ಧಿ ಅಸಿದ್ಧಿ ಎರಡರಲ್ಲೂ ಸಮಚಿತ್ತನಾಗಿದ್ದುಕೊಂಡು ಮಾಡು । |
| ಸಮತ್ವಂ ಯೋಗಃ ಉಚ್ಯತೇ । | ಸಮಚಿತ್ತನಾಗಿರುವಿಕೆಯೇ 'ಯೋಗ' ಎನಿಸುತ್ತದೆ ॥೪೮॥ |

(ತ್ರಿವಿಧ ಸಂಗತ್ಯಾಗಮಾಡಿ, ಸಮಚಿತ್ತದಿಂದ ಕೂಡಿ, ಯಾವುದೇ ಕಾರ್ಯವನ್ನು ಮಾಡುವುದೇ ಕರ್ಮಯೋಗ)

**ದೂರೇಣ ಹ್ಯವರಂ ಕರ್ಮ ಬುದ್ಧಿ ಯೋಗಾತ್ ಧನಂಜಯ ।**
**ಬುದ್ಧೌ ಶರಣ ಮನ್ವಿಚ್ಛ ಕೃಪಣಾಃ ಫಲಹೇತವಃ ॥೪೯॥**

| | |
|---|---|
| ಧನಂಜಯ ! ಬುದ್ಧಿಯೋಗಾತ್, | ಧನಂಜಯನೇ ! ಸಮತ್ವ ಬುದ್ಧಿಯೋಗವುಳ್ಳ |
| ಕರ್ಮ | ಕರ್ಮಕ್ಕಿಂತ, ಕೇವಲ ಕರ್ಮವು, |
| ದೂರೇಣ ಅವರಂ ಹಿ । | ಬಹಳ ಕೀಳಾದುದು, ಖಂಡಿತ । |
| ಬುದ್ಧೌ ಶರಣಮ್ ಅನ್ವಿಚ್ಛ । | ಸಮತ್ವ ಬುದ್ಧಿಯಲ್ಲಿ ಆಶ್ರಯವನ್ನು ಕಂಡುಕೊಳ್ಳು । |
| ಕೃಪಣಾಃ ಫಲಹೇತವಃ । | ಫಲಕ್ಕಾಗಿ ಕೆಲಸಮಾಡುವವರು ದೀನರು। |
| | (ಧೀರರಲ್ಲ. ಅವರನ್ನೇ ಸಂಸಾರಿಗಳೆನ್ನುವುದು) |

(ಫಲದಾಶೆಯಿಂದ ಕೆಲಸಮಾಡುವವರಿಗೆ ಸಂಸಾರಬಂಧ ಫಲಸಂಗಾದಿ ಬಿಟ್ಟು ವಿಹಿತ ಕರ್ಮ ಮಾಡುವವರಿಗೆ ಮೋಕ್ಷ !)

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ**
**ತಸ್ಮಾದ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥೫೦॥**

| | |
|---|---|
| ಬುದ್ಧಿಯುಕ್ತಃ | ಸಮತ್ವ - ಬುದ್ಧಿಯ ಯೋಗ ಉಳ್ಳವನು |
| ಇಹ, ಸುಕೃತದುಷ್ಕೃತೇ ಉಭೇ | ಇಲ್ಲೇ, ಪ್ರಾಚೀನ ಪುಣ್ಯ ಪಾಪಗಳೆರಡನ್ನೂ |
| ಜಹಾತಿ। ತಸ್ಮಾದ್ | ತ್ಯಜಿಸುತ್ತಾನೆ । ಆದ್ದರಿಂದ |

| | |
|---|---|
| ಯೋಗಾಯ ಯಜ್ಯಸ್ವ | ಬುದ್ಧಿಯೋಗಕ್ಕಾಗಿ ಉದ್ಯುಕ್ತನಾಗು । |
| ಯೋಗಃ ಕರ್ಮಸು ಕೌಶಲಂ । | ಬುದ್ಧಿಯೋಗವೇ ಕರ್ಮಾಚರಣೆಯಲ್ಲಿ ಸಾಮರ್ಥ್ಯಾತಿಶಯವು । |

(ಆತ್ಮಯಾಥಾತ್ಮ್ಯನಿಶ್ಚಯ ಬುದ್ಧಿಯಿಂದ ಯಾವಾಗಲೂ ಸಹಿತನಾಗಿ ಫಲಸಂಗಾದಿ ತ್ಯಾಗ ಪೂರ್ವಕ ಕರ್ಮಮಾಡುವುದು ಮುಮುಕ್ಷುವಿನ ಸಾಮರ್ಥ್ಯಾತಿಶಯ। ಸಂಸಾರಿಗಳಿಗೆ (ರಾಜಸತಾಮಸಿಗಳಿಗೆ) ಈ ಸಾಮರ್ಥ್ಯ ದುರ್ಲಭ)

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಮ್ ॥೫೧॥**

| | |
|---|---|
| ಬುದ್ಧಿಯುಕ್ತಾಃ ಕರ್ಮಜಂ ಫಲಂತ್ಯಕ್ತ್ವಾ, | ಆತ್ಮಬಲದಿಂದಾಗಿ ಸಮತ್ವ ಬುದ್ಧಿಯಿಂದ ಕೂಡಿದವರು ಕರ್ಮಫಲ ತ್ಯಾಗ ಮಾಡಿ |
| ಮನೀಷಿಣಃ, ಜನ್ಮ-ಬಂಧ-ವಿನಿರ್ಮುಕ್ತಾಃ | ಜ್ಞಾನಿಗಳಾಗಿ, ಜನ್ಮ - ಮೃತ್ಯು - ಜರಾ - ವ್ಯಾಧಿಗಳ ಸೆರೆಯಿಂದ ವಿಮುಕ್ತರಾಗಿ, |
| ಅನಾಮಯಂ ಪದಂ, ಗಚ್ಛನ್ತಿ । ಹಿ। | ಸಕಲವಿಧ 'ರೋಗ' ರಹಿತವಾದ 'ಅಮೃತತ್ವ'ದ ಸ್ಥಾನವನ್ನು ಹೋಗಿ ಸೇರುತ್ತಾರೆ ಸಂಶಯವಿಲ್ಲ । |

(ಕರ್ಮಯೋಗಾನುಷ್ಠಾನದಿಂದ ಕ್ರಮೇಣ ಆತ್ಮಜ್ಞಾನಿಗಳಾಗುತ್ತಾರೆ । ಅನಂತರ ಕ್ರಮೇಣ ನಿರ್ದೋಷಿಗಳಾಗಿ ಅಮೃತತ್ವ ಹೊಂದಿಬಿಡುತ್ತಾರೆ)

**ಯದಾತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥**

| | |
|---|---|
| ಯದಾ ತೇ | ಯಾವಾಗ (ಸಂಗತ್ರಯತ್ಯಾಗ ಮಾಡಿ ಕರ್ಮಾಚರಣೆ ಮಾಡುವ) ನಿನ್ನ |
| ಬುದ್ಧಿಃ, ಮೋಹಕಲಿಲಂ, | ಬುದ್ಧಿಯು, (ಪ್ರಾಕೃತ ಕ್ಲೇಶ-ಸಂತೋಷಗಳು ತನ್ನದೆಂಬ) |
| ವ್ಯತಿತರಿಷ್ಯತಿ, ತದಾ ಶ್ರುತಸ್ಯ | ಅಜ್ಞಾನದ ಕೆಸರನ್ನು, ಸಂಪೂರ್ಣ ದಾಟುತ್ತದೆಯೋ, ಆಗ, ಇದುವರೆಗೆ ಶ್ರವಣ ಮಾಡಿದ ವಿಚಾರಗಳಿಗಾಗಿಯೂ, |
| ಶ್ರೋತವ್ಯಸ್ಯಚ, | ಇನ್ನೂ ಶ್ರವಣ ಮಾಡ ಬೇಕಾಗಿರುವ ವಿಚಾರಗಳಿಗಾಗಿಯೂ, |
| ನಿರ್ವೇದಂಗನಾಸ್ತಿ | ನೀನಾಗಿಯೇ ಪಶ್ಚಾತ್ತಾಪ ಹೊಂದುವೆ. |

(ಅಜ್ಞಾನದಾಟಿ ಆತ್ಮಜ್ಞಾನಿಯಾದಾಗ-ಇದೇಕೆ ನಾನು ಇಷ್ಟು ಸ್ಪಷ್ಟವಾಗಿರುವ ವಸ್ತುಸ್ಥಿತಿ ಗೊತ್ತಾಗದೆ ಇಷ್ಟೊಂದು ಹೇಳಿಸಿಕೊಂಡೆ ? ಅಮೃತತ್ವಕ್ಕೆ ಯೋಗ್ಯನಾಗದೆ ನಾನೇಕೆ ಇಷ್ಟು ಕಾಲ ಕಳೆದೆ ? - ಎಂದು ವಿಸ್ಮಯ ಹಾಗೂ ಪಶ್ಚಾತ್ತಾಪಗಳನ್ನು ಪಡುತ್ತೀಯೆ)

**ಶ್ರುತಿವಿಪ್ರತಿಪನ್ನಾ ತೇ ಯದಾಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಃ ತದಾಯೋಗಮವಾಪ್ಸ್ಯಸಿ ॥೫೩॥**

| | |
|---|---|
| ಶ್ರುತಿ- | ಆತ್ಮದ ಬಗ್ಗೆ ಮತ್ತು ಕರ್ಮಯೋಗದ ಬಗ್ಗೆ ಶ್ರದ್ಧೆಯಿಂದ ಶ್ರವಣಮಾಡಿದ್ದರಿಂದ |

Funding: Tattva Heritage Foundation,Kolkata. Digitization: eGangotri.

| | |
|---|---|
| ವಿಪ್ರತಿಪನ್ನಾ | ವಿಶೇಷವಾಗಿ ಪ್ರಬುದ್ಧವಾಗಿ |
| ಅಚಲಾ | ಚಲಿಸದೆ ಆತ್ಮವೆಂಬ ಒಂದೇಧ್ಯೇಯದಲ್ಲಿ ನಿಲ್ಲುವ |
| ತೇ ಬುದ್ಧಿಃ, ಯದಾ ನಿಶ್ಚಲಾ | ನಿನ್ನ ಪ್ರಜ್ಞೆಯು, ಯಾವಾಗ ಸ್ಥಿರವಾಗಿ (ಆತ್ಮೇತರ ವಿಷಯಕ್ಕೆ ಹೋಗದೆ) |
| ಸ್ಥಾಸ್ಯತಿ, ತದಾ "ಯೋಗಮ್' | ಸ್ಥಿತವಾಗುತ್ತದೆಯೋ, ಆಗ 'ಆತ್ಮದರ್ಶನ ಯೋಗ' |
| ಅವಾಪ್ಸ್ಯಸಿ | ವನ್ನು ಪಡೆಯುತ್ತೀಯೆ । |

(ಸದಾಚಾರ್ಯ ಮುಖಾತ್ ಉಪದೇಶ ಪಡೆಯುತ್ತಲೇ ಇರುತ್ತಾ, ಅದರಂತೆ ಕರ್ಮಯೋಗವನ್ನಾಚರಿಸುತ್ತಾ ಆತ್ಮದಲ್ಲೇ ಮಸಸ್ಸು ನಿಲ್ಲಲು ಪ್ರಾರಂಭವಾಗುತ್ತದೆ ಹಾಗೇ ಮುಂದುವರಿದು ಇತರ ವಿಷಯ ಯಾವುದರಲ್ಲೂ ಮನಸ್ಸು ನಿರ್ಗಮಿಸದಿದ್ದರೆ ಆತ್ಮ ದರ್ಶನಕ್ಕೆ ಸಹಜವಾಗಿ ಸಾಧನೆ ಸಿದ್ಧಿಸುತ್ತದೆ)

ಅರ್ಜುನ ಉವಾಚ

**ಸ್ಥಿತಪ್ರಜ್ಞಸ್ಯ ಕಾ ಭಾಷಾ ? ಸಮಾಧಿಸ್ಥಸ್ಯ ಕೇಶವ !।**
**ಸ್ಥಿತಧೀಃ ಕಿಂ ಪ್ರಭಾಷೇತ? ಕಿಮಾಸೀತ ? ವ್ರಜೇತ ಕಿಮ್ ? ॥೫೪॥**

| | |
|---|---|
| ಕೇಶವ ! ಸಮಾಧಿಸ್ಥಸ್ಯ ಸ್ಥಿತಪ್ರಜ್ಞಸ್ಯ | ಕೇಶವನೇ! ಚಿತ್ತಸಮಾಧಾನವಂತನಾಗಿ ನಿಶ್ಚಲ ಪ್ರಜ್ಞೆಯುಳ್ಳವನಾಗಿರುವಾತನ |

| | |
|---|---|
| ಭಾಷಾ ಕಾ ? | ಸ್ವರೂಪವರ್ಣನೆ ಏನು ? |
| ಸ್ಥಿತಧೀಃ ಕಿಂ ಪ್ರಭಾಷೇತ ? | ಸ್ಥಿರ ಬುದ್ಧಿ ಯಾದವನು ಯಾವ ಮಾತನಾಡುತ್ತಾನೆ ? |
| ಕಿಮ್ ಆಸೀತ ? | ಯಾವ ಮಾನಸಿಕ ಸ್ಥಿತಿಹೊಂದಿ ಕುಳಿತಿರುತ್ತಾನೆ ? |
| ಕಿಮ್ ವ್ರಜೇತ ? | ಹೇಗೆ ನಡೆಯುತ್ತಾನೆ ? (ಸ್ಥಿತ ಪ್ರಜ್ಞನ ಸ್ವರೂಪವೇನು ? ಪ್ರಪಂಚದಲ್ಲಿ ಅವನ ಮಾತುಮನಸ್ಸು,ನಡುವಳಿಕೆ ಹೇಗೆ?) |

ಶ್ರೀ ಭಗವಾನುವಾಚ

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಃ ತದೋಚ್ಯತೇ ॥೫೫॥**

**(ಆತ್ಮಾನುಭವ ಸ್ಥಿತಿ)**

| | |
|---|---|
| ಹೇ ಪಾರ್ಥ ! ಆತ್ಮನಿ ಏವ ಆತ್ಮನಾ | ಎಲೈಕೌನ್ತೇಯ ! ಆತ್ಮನಲ್ಲೇ(ನಿಂತ) ಮನಸ್ಸಿನಿಂದ |
| ತುಷ್ಟಃ, ಸರ್ವಾನ್ ಮನೋಗತಾನ್ | ಅಲೌಕಿಕ ಸಂತೋಷಪಡೆದು, ಇತರ ಎಲ್ಲ ಅಂತರ್ಗತ |
| ಕಾಮಾನ್, | ಮನೋರಥಗಳನ್ನೂ |
| ಯದಾ ಪ್ರ-ಜಹಾತಿ ತದಾ | ಯಾವಾಗ ಪೂರ್ಣಬಿಡುತ್ತಾನೋ ಆಗ |
| ''ಸ್ಥಿತಪ್ರಜ್ಞಃ'' ಉಚ್ಯತೇ । | 'ಸ್ಥಿತಪ್ರಜ್ಞ''ನೆನಿಸುತ್ತಾನೆ । |

(ಇದು ಆತ್ಮದರ್ಶಿಯಾದ ಅತ್ಯುತ್ತಮ ಮಟ್ಟದ ಸ್ಥಿತಪ್ರಜ್ಞ। ದೇಹ ವಿಸ್ಮರಣೆಯ ಸ್ಥಿತಿಯಿದು। - ಜಮದಗ್ನಿ ಮಹರ್ಷಿಯಂತೆ)

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗ-ಭಯ-ಕ್ರೋಧಃ ಸ್ಥಿತಧೀರ್ ಮುನಿರುಚ್ಯತೇ ॥೫೬॥**

**(ಮನಃ ಸಂಯಮಸಾಧನೆಯ ಸ್ಥಿತಿ)**

| | |
|---|---|
| ದುಃಖೇಷು ಅನುದ್ವಿಗ್ನಮನಾಃ | ಅಪ್ರಿಯ ಸಂದರ್ಭಗಳಲ್ಲಿ ಉದ್ವೇಗರಹಿತ ಮನಸ್ಸುಳ್ಳವನು, |
| ಸುಖೇಷು ವಿಗತ-ಸ್ಪೃಹಃ, | ಪ್ರಿಯಸಂದರ್ಭಗಳಲ್ಲಿ ಆಸೆಯಿಲ್ಲದವನು, |
| ವೀತ-ರಾಗ-ಭಯ-ಕ್ರೋಧಃ, | ಅನುರಾಗ+ಭಯ-ಕೋಪಗಳಿಂದ ಮುಕ್ತನಾದವನು, |
| ಮುನಿಃ, | ಆತ್ಮಮನನ ಶೀಲನಾದವನು,(ಈ 4ಗುಣಗಳುಳ್ಳಾತನು) |
| 'ಸ್ಥಿತಧೀಃ' ಉಚ್ಯತೇ | 'ಸ್ಥಿತಪ್ರಜ್ಞ' ಎನಿಸುತ್ತಾನೆ |

(ಇವನು ಎರಡನೆಯ ಮಟ್ಟದ 'ಸ್ಥಿತಪ್ರಜ್ಞ'। ದುಃಖ ಸುಖ ಸಹಿಷ್ಣು । ಮನೋನಿಗ್ರಹಶಾಲಿ। ಮುನಿ। ದೇಹ ವಿಸ್ಮರಣೆ ಬಂದಿಲ್ಲ । ಜಡಭರತನಂತೆ ಎನ್ನ ಬಹುದು ।)

**ಯಸ್ಸರ್ವತ್ರಾನಭಿಸ್ನೇಹಃ ತತ್ತತ್ ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥**

**(ವಾಕ್‌ಸಂಯಮ ಸಾಧನೆಯ ಸ್ಥಿತಿ)**

| | |
|---|---|
| ಯಃ ಸರ್ವತ್ರ, ಅನಭಿಸ್ನೇಹಃ | ಯಾವಾತನು ಎಲ್ಲ ಪ್ರಿಯ ವಿಷಯಗಳಲ್ಲೂ ಅತಿಸ್ನೇಹರಹಿತನೋ |

| | |
|---|---|
| ತತ್‌ತತ್ ಶುಭಾಶುಭಂ ಪ್ರಾಪ್ಯ | ಆಯಾಯ ಪುಣ್ಯಪಾಪಫಲ ಅನುಭವಿಸುವಾಗಲೆಲ್ಲ |
| ನಾಭಿನನ್ದತಿ ನ ದ್ವೇಷ್ಟಿ | ಅಭಿನಂದಿಸುವುದೂ ಇಲ್ಲ ಬೇಸರಿಸುವುದೂ ಇಲ್ಲವೋ |
| ತಸ್ಯಪ್ರಜ್ಞಾ ಪ್ರತಿಷ್ಠಿತಾ ॥ | ಅವನ ಪ್ರಜ್ಞೆಯೂ ಆತ್ಮದಲ್ಲಿ ಪ್ರತಿಷ್ಠಿತ ॥ |

(ಇವನು ಮೂರನೆಯ ಮಟ್ಟದ 'ಸ್ಥಿತಪ್ರಜ್ಞ'। ವಿಷಯಗಳಲ್ಲಿ ಸ್ವತಃ ಪ್ರವೃತ್ತಿಯಿಲ್ಲದ ಋಷಿ। ದೈವಿಕವಾಗಿ ಬರುವ ಶುಭಾಶುಭಗಳಲ್ಲಿ ಮನಸ್ಸಿನಿಂದಲೂ ವಾಕ್ಕಿನಿಂದಲೂ ಶ್ಲಾಘನೆನಿಂದನೆ ಇಲ್ಲದಂತೆ ಯತ್ನಿಸುವವನು)

## ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।
## ಇನ್ದ್ರಿಯಾಣೀಂದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ॥೫೮॥

## (ಇಮದ್ರಿಯಸಂಯಮ ಸಾಧನೆಯ ಸ್ಥಿತಿ)

| | |
|---|---|
| ಯದಾ ಇಂದ್ರಿಯಾಣಿ | ಯಾವಾಗ ಪಂಚೇಂದ್ರಿಯಗಳನ್ನು |
| ಇಂದ್ರಿಯಾರ್ಥೇಭ್ಯಃ | ಪಂಚ ವಿಷಯಗಳದೆ ದೆಸೆಯಿಂದ |
| ಕೂರ್ಮಃ ಸರ್ವಶಃ ಅಂಗಾನೀವ, | ಆಮೆ ಎಲ್ಲೆಡೆಯಿಂದಲೂ ತನ್ನ ಅಂಗಗಳನ್ನು |
| ಸಂಹರತೇ | ಹಿಂದಕ್ಕೆಳೆದುಕೊಳ್ಳುವಂತೆ, ಹಿಂತಿರುಗಿಸಿ ಮನಸ್ಸನ್ನು |
| ತಸ್ಯ ಪ್ರಜ್ಞಾ ಪ್ರತಿಷ್ಠಿತಾ । | ತನ್ನೊಳಗಿರಿಸುತ್ತಾನೋ ಅವನೂ ಸ್ಥಿತಪ್ರಜ್ಞನೇ । |

(ಪ್ರಾರಂಭಿಕ ಮಟ್ಟದ ಸ್ಥಿತ ಪ್ರಜ್ಞನಿವನು । ಕಾಯಿಕ ಸಂಯಮದ ಸಾಧಕ)

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ।**
**ರಸವರ್ಜಂ, ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥**

(ಕೆಳಗಿನಿಂದ ಮೂರನೆಯ ಹಂತವನ್ನೇರಿದವನಿಗೂ 'ರಾಗ'/'ರುಚಿ' ಹೋಗಿರುವುದಿಲ್ಲ)

| | |
|---|---|
| ನಿರಾಹಾರಸ್ಯದೇಹಿನಃ | ಇಂದ್ರಿಯದ ಆಹಾರಗಳನ್ನು ಸ್ವೀಕರಿಸದಂತಹ ವ್ಯಕ್ತಿಗೆ |
| ವಿಷಯಾಃ, ರಸವರ್ಜಂ, | ಆ ಆಹಾರಗಳಾದ ಇಂದ್ರಿಯ ವಿಷಯಗಳು, ರುಚಿಯನ್ನು (ಅವನಲ್ಲಿ) ಬಿಟ್ಟು |
| ವಿನಿವರ್ತನ್ತೇ। ಅಸ್ಯರಸಃಅಪಿ | ಹಿಂತಿರುಗುತ್ತವೆ। ಇವನ ವಿಷಯ ರುಚಿಯೂಕೂಡ |
| ಪರಂ | ಇನ್ನೂ ಬಹಳ ಉತ್ಕೃಷ್ಟವಾದುದನ್ನು (ತನ್ನ ನಿಜಸ್ವರೂಪವನ್ನು) |
| ದೃಷ್ಟ್ವಾ ನಿವರ್ತತೇ | ದರ್ಶನ ಮಾಡಿದ ನಂತರ ಹಿಂತಿರುಗಿ ಬಿಡುತ್ತದೆ. |

(ನಾಲ್ಕನೆಯ ಎಂದರೆ ಆತ್ಮಾನುಭವವೆಂಬ ತುರೀಯಸ್ತರವನ್ನೇರಿದ ಮೇಲೆಮಾತ್ರವೇ ವಿಷಯರುಚಿ ಸಂಪೂರ್ಣ ಹೋಗುವುದು) ( ಅದಕ್ಕೆ ಮುಂಚೆ ವಿಷಯಗಳ ಆಕರ್ಷಣೆಗೆ ಬಲಿಯಾಗುವ ಸಂಭವ ಇದ್ದೇ ಇದೆ) (ವಿಷಯತ್ಯಾಗ ಮಾಡಿದವರನ್ನೆಲ್ಲ ಆತ್ಮದರ್ಶಿಯೆಂದು ನಂಬುವುದಲ್ಲ)

**ಯತತೋಹ್ಯಪಿ ಕೌನ್ತೇಯ ಪುರುಷಸ್ಯವಿಪಶ್ಚಿತಃ।**
**ಇನ್ದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥೬೦॥**

| | |
|---|---|
| ಕೌನ್ತೇಯ! ವಿಪಶ್ಚಿತಃ ಯತತಃ ಅಪಿ, | ಪಾರ್ಥ! ತತ್ತ್ವಜ್ಞನಾಗಿ ಸಂಯಮಯತ್ನಶೀಲ |

ಪುರುಷಸ್ಯ ಇನ್ದ್ರಿಯಾಣಿ ಪ್ರಮಾಥೀನಿ, ಮನಃ ಪ್ರಸಭಂ ಹರನ್ತಿ — ಸಾಗಿದ್ದರೂ ಕೂಡ, ದೇಹಧಾರಿಯ ಇನ್ದ್ರಿಯಗಳು ಹುಚ್ಚು ಕುದುರೆಗಳಂತೆ, ಮನಸ್ಸನ್ನು ಹಠಾತ್ತನೆ ಹೊಡೆದುಕೊಂಡು ಹೋಗಿ ಬಿಡುತ್ತವೆ ।

(ರಸ/ರಾಗ/ರುಚಿ ಎನ್ನುವುದೇ ಇಂದ್ರಿಯಗಳ ಬಲ) (ಆದ್ದರಿಂದ ಸ್ಥಿತಪ್ರಜ್ಞತೆಯ ಎಂದರೆ ಜ್ಞಾನಯೋಗದ ಮೊದಲಸ್ತರ ಏರುವುದೇ ಬಲುಕಷ್ಟ)

**ತಾನಿಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇನ್ದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥**

ತಾನಿ ಸರ್ವಾಣಿ, ಸಂಯಮ್ಯ, — ಅಂತಹ (ಪ್ರಬಲವಾದ) ಎಲ್ಲ ಇನ್ದ್ರಿಯಗಳನ್ನೂ,

ಮತ್ಪರಃ — ಯಥಾ ಶಕ್ತಿ ಸಂಯಮಿಸಿ, ನನ್ನಲ್ಲೇ ಮನಸ್ಸಿಟ್ಟು,

ಯುಕ್ತಃ, ಆಸೀತ। — ಸಮಚಿತ್ತನಾಗಿ, ನೆಮ್ಮದಿಯಿಂದಿರಬೇಕು । ('ಆಗ ಇಂದ್ರಿಯಗಳು ಅವನವಶಕ್ಕೆ ಬರುವಂತೆಅನುಗ್ರಹಿಸುತ್ತೇನೆ ಎಂದು ಭಾವ)

ಯಸ್ಯ ಇನ್ದ್ರಿಯಾಣಿ ವಶೇ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ — ಯಾರ ಇಂದ್ರಿಯಗಳು ಹತೋಟಿಯಲ್ಲಿರುತ್ತವೆಯೋ ಅವನ ಪ್ರಜ್ಞೆಯು ಆತ್ಮದಲ್ಲಿ ನಿಲ್ಲಲು ಸಾಧ್ಯ ॥

(ಇಂದ್ರಿಯ ಜಯವಿಲ್ಲದೆ ಜ್ಞಾನಯೋಗ ಸಿದ್ಧಿಯಿಲ್ಲ; ಜ್ಞಾನಯೋಗ ಸಿದ್ಧಿಯಿಲ್ಲದೆ ಇಂದ್ರಿಯ ಜಯನಂಬಲರ್ಹವಲ್ಲ। ಈ ಸಮಸ್ಯೆಗೆ ಪರಿಹಾರ - ಯಥಾ ಶಕ್ತಿಸಂಯಮಿಸಿ ಶ್ರೀಭಗವಂತನ ದಿವ್ಯಮಂಗಳವಿಗ್ರಹದಲ್ಲಿ ಮನಸ್ಸಿಡುವುದು । ದೈವಾನುಗ್ರಹದಿಂದ ಮೇಲೇರಲು ಸಾಧ್ಯ)

(ನನ್ನಲ್ಲಿ ಮನಸ್ಸಿಡದೆ ಸ್ವಯತ್ನದಿಂದಲೇ ಇಂದ್ರಿಯ ಸಂಯಮ ಸಾಧಿಸ ಹೋದರೆ ಏನಾಗುತ್ತದೆಯೆಂದರೆ)

**ಧ್ಯಾಯತೋ ವಿಷಯಾನ್ ಪುಂಸಃ ಸಙ್ಗಸ್ತೇಷೂಪಜಾಯತೇ।**
**ಸಙ್ಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥೬೨॥**

**ಕ್ರೋಧಾದ್ ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ।**
**ಸ್ಮೃತಿಭ್ರಂಶಾದ್ ಬುದ್ಧಿನಾಶಃ ಬುದ್ಧಿನಾಶಾತ್ ಪ್ರಣಶ್ಯತಿ ॥೬೩॥**

| | |
|---|---|
| ವಿಷಯಾನ್ ಧ್ಯಾಯತಃ | ವಿಷಯಗಳನ್ನು ರುಚಿಪ್ರೇರಿತನಾಗಿ ನೆನೆಸಿಕೊಳ್ಳುವ |
| ಪುಂಸಃ, ತೇಷುಸಙ್ಗಃ ಉಪಜಾಯತೇ । | ಸಾಧಕನಿಗೆ, ಅವುಗಳಲ್ಲೇ ಮನಸ್ಸಂಗ ಹೆಚ್ಚುತ್ತದೆ । |
| ಸಙ್ಗಾತ್ ಕಾಮಃಸಂಜಾಯತೇ । | ಸಂಗದಿಂದಾಗಿ ಭೋಗಕಾಮನೆ ಚೆನ್ನಾಗಿ ಉಂಟಾಗಿರುತ್ತದೆ। |
| ಕಾಮಾತ್ ಕ್ರೋಧಃ ಅಭಿಜಾಯತೇ । | ಕಾಮದಿಂದಾಗಿ (ಅದಕ್ಕಡ್ಡಿಯೆನಿಸಿದವರ ಮೇಲೆ) ಕ್ರೋಧ॥ |
| ಕ್ರೋಧಾದ್ ಭವತಿ ಸಂಮೋಹಃ। | ಕ್ರೋದದಿಂದಾಗಿ ಅತಿ ಅವಿವೇಕ । |
| ಸಂಮೋಹಾತ್ ಸ್ಮೃತಿವಿ ಭ್ರಮಃ। | ಅವಿವೇಕದಿಂದಾಗಿ, ಪ್ರಾರಂಭಿಸಲ್ಪಟ್ಟ ಇಂದ್ರಿಯ ಜಯಪ್ರಯತ್ನವೇ ಸ್ಮೃತಿ ಪಟಲದಿಂದ ನಾಶವಾಗುತ್ತದೆ । |
| ಸ್ಮೃತಿಭ್ರಂಶಾದ್ ಬುದ್ಧಿನಾಶಃ | ಸ್ಮೃತಿ ಹೋಗಿದ್ದರಿಂದ ಆತ್ಮಜ್ಞಾನನಿಶ್ಚಯ ನಾಶವಾಗುತ್ತದೆ |

ಬುದ್ಧಿನಾಶಾತ್ ಪ್ರಣಶ್ಯತಿ — ಬುದ್ಧಿ ಕಳೆದು ಹೋದುದರಿಂದ ಪ್ರಣಾಶಹೊಂದುತ್ತಾನೆ. (ಎಂದರೆ ಜನ್ಮ ಮರಣ ಚಕ್ರವೆಂಬ ಸಂಸಾರದಲ್ಲಿ ಮುಳುಗಿ ಪಾಮರ ಜಂತು ಸಮಾನವಾಗುತ್ತಾನೆ ನರಕಭಾಗಿಯೂ ಆಗುತ್ತಾನೆ.)

(ಜ್ಞಾನಯೋಗದಿಂದ ಆತ್ಮದರ್ಶನಕ್ಕೆ ಸ್ವಶಕ್ತಿಯಿಂದಲೇ ಪ್ರಯತ್ನಿಸುವವನನ್ನು ಇಂದ್ರಿಯಗಳು ಇವನ ಮನದಲ್ಲಿ ವಾಸವಾಗಿರುವ ರಸ/ರಾಗದ ಬಲದಿಂದ ಬಲಿತೆಗೆದುಕೊಳುತ್ತವೆ.)

**ರಾಗದ್ವೇಷವಿಯುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥೬೪॥**

**ಪ್ರಸಾದೇ, ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋಹಿ+ ಆಶು ಬುದ್ಧಿಃ ಪರ್ಯವತಿಷ್ಠತೇ ॥೬೫॥**

('ಶುಭಾಶ್ರಯ'ನಲ್ಲಿ ಮನಸ್ಸಿಟ್ಟು ಪ್ರಯತ್ನಿಸುವ ಸಾಧಕನಾದರೋ)
(ಶುಭಾಶ್ರಯನ ಅನುಗ್ರಹದಿಂದ)

ರಾಗ-ದ್ವೇಷ-ವಿಯುಕ್ತೈಃ, ಆತ್ಮವಶ್ಯೈಃ ಇಂದ್ರಿಯೈಃ, ವಿಷಯಾನ್ — ರಾಗ-ದ್ವೇಷಗಳಿಲ್ಲದ, ಮನಸ್ಸಿಗೆ ವಿಧೇಯವಾದ, ಪಂಚೇಂದ್ರಿಯಗಳಿಂದ, ಶಬ್ದಾದಿವಿಷಯಗಳನ್ನು

| | |
|---|---|
| ಚರರ್, | ತುಳಿದು ನಡೆಯುವವನು (ತಿರಸ್ಕರಿಸಿ ವರ್ತಿಸು |
| ವಿಧೇಯಾತ್ಮಾ, | ವವನು), ತನಗೆ ವಿಧೇಯವಾದ ಮನಸ್ಸುಳ್ಳ |
| ಪ್ರಸಾದಮ್ ಅಧಿಗಚ್ಛತಿ । | ವನಾಗಿ, ಮನಃಪ್ರಸನ್ನತೆಯನ್ನು ಪಡೆಯುತ್ತಾನೆ । |
| ಪ್ರಸಾದೇ, ಅಸ್ಯಸರ್ವದುಃಖಾ- | ಹೀಗೆ ಮನೋನ್ನೈರ್ಮಲ್ಯವುಂಟಾಗಲಾಗಿ, |
| ನಾಂ ಹಾನಿಃ ಉಪಜಾಯತೇ । | ಈ ಸಾಧಕನ ಎಲ್ಲ ಪ್ರಾಕೃತಕ್ಲೇಶಗಳ ನಾಶವು |
| ಪ್ರಸನ್ನಚೇತಸಃ ಬುದ್ಧಿಃ | ಉಂಟಾಗುತ್ತದೆ । ಕಶ್ಮಲವೇ ಇಲ್ಲದ ಮನಸ್ಸುಳ್ಳವನಿಗೆ ಬುದ್ಧಿಯು (ಆತ್ಮಸ್ವರೂಪ ನಿಷ್ಠಬುದ್ಧಿಯು) |
| ಆಶು ಪರ್ಯವತಿಷ್ಠತೇ | ಬೇಗ ಎಲ್ಲ ಪ್ರಕಾರದಿಂದಲೂ ಸುಸ್ಥಿರವಾಗುತ್ತದೆ ॥ |

(ವಿಷಯಗಳು ಇಂದ್ರಿಯವಶ-ಇಂದ್ರಿಯಗಳು ಮನೋವಶ-ಮನಸ್ಸು ಆತ್ಮವಶ। ಇಂತಹ ಮನಸ್ಸು ನಿಷ್ಕಲ್ಮಷ→ಕ್ಲೇಶನಾಶ→ಆತ್ಮನಿಷ್ಠಬುದ್ಧಿ→ಸ್ಥಿತಪ್ರಜ್ಞ)

**ನಾಸ್ತಿ ಬುದ್ಧಿರಯುಕ್ತಸ್ಯ ನಚಾಯುಕ್ತಸ್ಯ ಭಾವನಾ ।**
**ನಚಾಭಾವಯತಃ ಶಾನ್ತಿಃ ಅಶಾನ್ತಸ್ಯ ಕುತಸ್ಸುಖಮ್ ॥೬೬॥**

| | |
|---|---|
| ಅಯುಕ್ತಸ್ಯ | ನನ್ನಲ್ಲಿ ಒಪ್ಪಿಸಲ್ಪಟ್ಟ ಮನಸ್ಸಿಲ್ಲದವನಿಗೆ |
| ಬುದ್ಧಿಃ, ನಾಸ್ತಿ । | ಆತ್ಮದ ಬಗ್ಗೆ ನಿಶ್ಚಯ ಬುದ್ಧಿ, ಉಂಟಾಗುವುದಿಲ್ಲ (ಪಾಮರನಿಗೆ), ನಿಲ್ಲುವುದಿಲ್ಲ (ಸಾಧಕನಿಗೆ)। |

| | |
|---|---|
| ಅಯುಕ್ತಸ್ಯ ಭಾವನಾ ನ ಚ । | ನನ್ನಲ್ಲಿ ತನ್ನ ಮನಸ್ಸಿನ ಸಂಯೋಜನೆ ಮಾಡದವನಿಗೆ ಆತ್ಮವಿಷಯಕ ಭಾವನೆಯೂ (ಎಂದರೆ ಪ್ರೀತಿ ಪೂರ್ವಕ ಮನನವೂ) ಇರುವುದಿಲ್ಲ (ಪಾಮರನಿಗೆ), ನಿಲ್ಲುವುದಿಲ್ಲ (ಸಾಧಕನಿಗೆ). |
| ಅಭಾವಯತಃ, ಶಾನ್ತಿಃ ನ ಚ । | ಶುದ್ಧಾತ್ಮಸ್ವರೂಪ ವೈಭವ ಭಾವನೆಯಿಲ್ಲದವನಿಗೆ, ವಿಷಯ ರುಚಿ ಶಮನವಾಗುವುದೇ ಇಲ್ಲ । |
| ಅಶಾನ್ತಸ್ಯ ಕುತಃ ಸುಖಮ್ । | ವಿಷಯ ಭಾವನೆ ಹೋಗದವನಿಗೆ ಅಮೃತತ್ತ್ವದ ಸುಖ ಹೇಗೆ ತಾನೇ ಬರಲು ಸಾಧ್ಯ ? |

(ಬುದ್ಧಿಃನಾಸ್ತಿ=ಮನಸ್ಸನ್ನು ಆತ್ಮದ ಕಡೆಗೆ ತಿರುಗಿಸಲಾಗುವುದಿಲ್ಲ । 'ಪ್ರತ್ಯಾಹಾರ' ಎಂಬ ಯೋಗಾಂಗವಿಲ್ಲ ಎಂದರ್ಥ । ಆದ್ದರಿಂದ, ಭಾವನಾನ ಚ = ಆತ್ಮದಲ್ಲಿ ಪ್ರೀತಿಯಿಂದ ಮನಸ್ಸನ್ನು ನಿಲ್ಲಿಸುವುದು ಸಾಧ್ಯವಿಲ್ಲ ।' ಧಾರಣಾ' ಇಲ್ಲ । ಆದ್ದರಿಂದ, ಶಾನ್ತಿಃನ ಚ = ವಿಷಯ ರುಚಿಶಮನವಾಗಿ ಅವಿಚ್ಛಿನ್ನತೈಲಧಾರೆಯಂತೆ ಆತ್ಮಚಿನ್ತನ ಸಾಧ್ಯವಿಲ್ಲ. ಅರ್ಥಾತ್ 'ಧ್ಯಾನ' ಇಲ್ಲ'.
ಆದ್ದರಿಂದ , ಸುಖಂ ಕುತಃ =ನಿರತಿಶಯ ಆನಂದ ಕೊಡುವ 'ಸಮಾಧಿ' ಹೇಗೆ ಸಾಧ್ಯ ?
ಹೀಗೆ ಅಷ್ಟಾಂಗಯೋಗದ ಕೊನೆಯ 4 ಹಂತಗಳು ಸಿದ್ಧಿಸುವುದಿಲ್ಲ ಭಗವದನುಗ್ರಹ ಇಲ್ಲದಿದ್ದರೆ। ಪ್ರಾಣಾಯಾಮ, ಆಸನ ಎಂಬ ಅಂಗಗಳು ದೈಹಿಕ ಸಾಧನೆಯಿಂದ ಸಿದ್ಧಿಸಬಹುದಷ್ಟೆ । ಯಮ, ನಿಯಮಗಳೂ ದುಸ್ಸಾಧ್ಯವೇ। ಪ್ರತ್ಯಾಹಾರಾದಿಗಳಂತೂ ಸ್ವಪ್ನಪ್ರಾಯ !

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವ ಮಿವಾಮ್ಭಸಿ ॥೬೭॥**

ಚರತಾಂ ಇನ್ದ್ರಿಯಾಣಾಮ್ ಅನು — ವಿಷಯಗಳಲ್ಲಿ ಪ್ರವರ್ತಿಸುತ್ತಿರುವ ಇಂದ್ರಿಯಗಳನ್ನು ಅನುಸರಿಸಲು

ಯತ್ ಮನಃ ವಿಧೀಯತೇ — ಯಾವ ಮನಸ್ಸು (ಆತ್ಮನಿಂದ) ಪ್ರೇರಿಸಲ್ಪಡುತ್ತದೆಯೋ,

ತದ್ ಅಸ್ಯಪ್ರಜ್ಞಾಂ ಹರತಿ; — ಅದು (ಮನಸ್ಸು) ಇವನ ಬುದ್ಧಿಯನ್ನು ಅಪಹರಿಸುತ್ತದೆ;

ವಾಯುಃ ಅಂಭಸಿ ನಾವಮಿವ ಹಿ ! — (ಬಿರು)ಗಾಳಿಯು(ಸಮುದ್ರದ)ನೀರಿನಲ್ಲಿ ನಾವೆಯನ್ನು ಹೊಡೆದುಕೊಂಡು ಹೋಗುವಂತೆ! ಇದು ಪ್ರಸಿದ್ಧವಾದ ವಿಷಯ!

(ಜೀವನವೆಂಬ ಸಂಸಾರಸಾಗರದ ನೀರು ! ಮನಸ್ಸು ಬಿರುಗಾಳಿ 'ಬುದ್ಧಿ'ನಾವೆ!॥ ಅನುಕೂಲವಾದ ಗಾಳಿ ವಾಯುವಾಗಬೇಕಾದರೆ ಭಗವದನುಗ್ರಹದಿಂದ ಮಾತ್ರ ಸಾಧ್ಯ !) (ಆಗ ಆತ್ಮಾ ಮನಸ್ಸನ್ನು ಇಂದ್ರಿಯಗಳು ಅಪಹರಿಸಲು ಬಿಡುವುದಿಲ್ಲ)

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಃ ತಸ್ಯಪ್ರಜ್ಞಾ ಪ್ರತಿಷ್ಠಿತಾ ॥೬೮॥**

ತಸ್ಮಾತ್ — ಇಂದ್ರಿಯಾನುವರ್ತಿಯಾದ ಮನಸ್ಸು ಪ್ರಜ್ಞೆಯನ್ನು ಹೊಡೆದುಕೊಂಡು ಹೋಗುತ್ತದೆಯಾದ್ದರಿಂದ (ಎಚ್ಚೆತ್ತುಕೊಂಡು)

| | |
|---|---|
| ಯಸ್ಯ | (ಶುಭಾಶ್ರಯನಾದ ನನ್ನಲ್ಲಿ ಮನಸಸ್ಸನ್ನು ನೆಲೆಗೊಳಿಸಿದ) ಯಾವಾತನ |
| ಇನ್ದ್ರಿಯಾಣಿ, ಇನ್ದ್ರಿಯಾರ್ಥೇಭ್ಯಃ, | ಇಂದ್ರಿಯಗಳು, ಇಂದ್ರಿಯ ವಿಷಯಗಳ ದೆಸೆಯಿಂದ, |
| ಸರ್ವಶಃ ನಿಗ ಹೀತಾನಿ, | ಎಲ್ಲ ವಿಧದಲ್ಲೂ ನಿಗ್ರಹಿಸಲ್ಪಟ್ಟಿವೆಯೋ, |
| ತಸ್ಯ ಪ್ರಜ್ಞಾ ಪ್ರತಿಷ್ಠಿತಾ | ಅವನಿಗೆ ಮಾತ್ರವೇ ಬುದ್ಧಿಯು ಆತ್ಮತತ್ತ್ವದಲ್ಲಿ ಸುಸ್ಥಿರವಾಗುರುತ್ತದೆ ॥ |

(ಶ್ರೀ ಭಗವಂತನ ದಿವ್ಯಮಂಗಳ ವಿಗ್ರಹವನ್ನು ಪ್ರೀತಿಸಿ ಪೂಜಿಸಿ ಅವನಲ್ಲಿ ಮನಸ್ಸು ನಿಲ್ಲಿಸಲು ಆದ ಹೊರತು ಜ್ಞಾನ ನಿಷ್ಠೆ ಅಸಾಧ್ಯ)

(ಶ್ರೀ ವಾಸುದೇವನ ಅನುಗ್ರಹವನ್ನು ಹಾಗೆ ಪಡೆದವನಿಗೆ ಇಂದ್ರಿಯ ಜಯ ಕೈಗೂಡಿ ಆತ್ಮತತ್ತ್ವದರ್ಶನದವರೆಗೆ ಹೋಗಲು ಸಾಧ್ಯ)

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ**
**ಯಸ್ಯಾಂಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥**

| | |
|---|---|
| ಯಾ | ಯಾವುದು (ಆತ್ಮಯಾಥಾತ್ಮ್ಯ ನಿಶ್ಚಯ ಬುದ್ಧಿ) |
| ಸರ್ವಭೂತಾನಾಂ ನಿಶಾ | ಎಲ್ಲ ಅಜಿತೇಂದ್ರಿಯರಿಗೂ ರಾತ್ರಿಯಕಗ್ಗತ್ತಲೋ |
| ತಸ್ಯಾಂ ಸಂಯಮೀ ಜಾಗರ್ತಿ | ಅದರಲ್ಲಿ ಜಿತೇಂದ್ರಿಯನು ಚೆನ್ನಾಗಿ ಎಚ್ಚರವಾಗಿರುತ್ತಾನೆ. (ಹಗಲಿನಲ್ಲಿ ಹೇಗೋ ಹಾಗೆ) |

| | |
|---|---|
| ಯಸ್ಯಾಂ ಭೂತಾನಿ ಜಾಗ್ರತಿ | ಯಾವುದರಲ್ಲಿ (ವಿಷಯಾಸಕ್ತ ಬುದ್ಧಿಯಲ್ಲಿ) ಜಂತುಗಳು ಎಚ್ಚರವಾಗಿರುತ್ತಾರೆಯೋ |
| ಸಾ ಪಶ್ಯತೋ ಮುನೇಃ | ಅದು ಆತ್ಮದರ್ಶನಾಸಕ್ತ ಜ್ಞಾನಯೋಗಿಗೆ |
| ನಿಶಾ | ರಾತ್ರಿಯಂತೆ ಮನಸ್ಸಿನ ಕಣ್ಣಿಗೆ ಹೊರತಾದ ವಿಷಯ |

(ಪಾಮರನಿಗೆ ಆತ್ಮವೈಭವ ಕತ್ತಲೆಯ ಪ್ರಪಂಚ । ಜಿತೇಂದ್ರಿಯ ಜ್ಞಾನಿಗೆ ವಿಷಯ ಜಾಲ ಕತ್ತಲೆಯ ಪ್ರಪಂಚ ॥

**ಆಪೂರ್ಯಮಾಣಮ್+ಅಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶನ್ತಿ ಸರ್ವೇ ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥೭೦॥**

| | |
|---|---|
| ಆಪೂರ್ಯಮಾಣಮ್ | ತನ್ನಿಂದಲೇ ಎಲ್ಲೆಡೆ ಪೂರ್ಣವಾಗಿರುವ |
| ಅಚಲ ಪ್ರತಿಷ್ಠಮ್ | ಯಾವಾಗಲೂ ಏಕರೂಪವಾಗಿರುವ |
| ಸಮುದ್ರಮ್ ಯದ್ವತ್ ಆಪಃ | ಸಮುದ್ರವನ್ನು ಹೇಗೆ ನದೀ ಪ್ರವಾಹಗಳು |
| ಪ್ರವಿಶನ್ತಿ | ಪ್ರವೇಶಿಸುತ್ತವೆಯೋ (ಸಮುದ್ರಕ್ಕೆ ಏನೂ ವ್ಯತ್ಯಾಸ ಉಂಟು ಮಾಡಲಾಗದೆ ಪ್ರವೇಶಿಸುತ್ತವೆಯೋ |
| ತದ್‌ವತ್ ಯಂ | ಅದರಂತೆ ಯಾವ ಸಂಯಮಿಯನ್ನು (ಆತ್ಮಾಸಕ್ತನನ್ನು) |
| ಸರ್ವೇ ಕಾಮಾಃ | ಇಂಪು ತಂಪು ಕಂಪು ಮುಂತಾದ ಎಲ್ಲ ಕಾಮ್ಯ ವಿಷಯಗಳೂ |

| | |
|---|---|
| ಪ್ರವಿಶನ್ತಿ | ಬಂದು ಸೇರುತ್ತವೆಯೋ |
| ಸಃ ಶಾನ್ತಿಮ್ ಆಪ್ನೋತಿ | ಅವನು ನೆಮ್ಮದಿಯನ್ನು ಹೊಂದಿರುತ್ತಾನೆ |
| ಕಾಮಕಾಮೀ ನ | ಕಾಮ್ಯಗಳ ಬೆನ್ನು ಹತ್ತಿ ಹೋಗುವವನು ನೆಮ್ಮದಿಕಾಣಲಾರ॥ |

(ಆತ್ಮನಿಷ್ಠನಾದ ಜಿತೇಂದ್ರಿಯನಿಗೆ ಧ್ಯೇಯಸಾಧನೆಯ ನೆಮ್ಮದಿಯಿರುತ್ತವೆ । ವಿಷಯ ನಿಷ್ಠನಿಗೆ ನೆಮ್ಮದಿ ಅಸಾಧ್ಯ)

(ಹಾಗಾದರೆ ಕಾಮಕಾಮಿಯು ಉದ್ಧಾರವಾಗಲು ಇಷ್ಟಪಟ್ಟಾಗ ದಾರಿಯಾವುದು ಎಂದರೆ)

**ವಿಹಾಯಕಾಮಾನ್ ಯಸ್ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ**
**ನಿರ್ಮಮೋ ನಿರಹಂಕಾರಃ ಸಶಾನ್ತಿಮಧಿಗಚ್ಛತಿ ॥೭೧॥**

| | |
|---|---|
| ಯಃ ಪುಮಾನ್ | ಯಾವುದೇ (ಆತ್ಮದರ್ಶನೇಚ್ಛುವಾದ) ಮನುಷ್ಯನು (೧) |
| ಸರ್ವಾನ್ ಕಾಮಾನ್ ವಿಹಾಯ | ಎಲ್ಲ ಇಂದ್ರಿಯ ವಿಷಯಗಳಲ್ಲಿ ಆಸಕ್ತಿ ಬಿಟ್ಟು (೨), |
| ನಿಸ್ಪೃಹಃ | ಕರ್ಮಫಲದಾಸೆ ತೊರೆದು (೩) |
| ನಿರ್ಮಮಃ | ತನ್ನದೇಹ ತನ್ನಶ್ರಮ ತನ್ನಧನ ತನ್ನ ಪದಾರ್ಥಗಳು ಇತ್ಯಾದಿ ಮಮತೆ ತೊರೆದು (೪) |
| ನಿರಹಂಕಾರಃ | ದೇಹವೇ ನಾನೆಂಬ ಮೋಹವನ್ನೂ ಕರ್ಮಕರ್ತ ನಾನು ಎಂಬ ಭಾವವನ್ನೂ ಬಿಟ್ಟು (೫) |

| | |
|---|---|
| ಚರತಿ | ವಿಹಿತ ಕರ್ಮಾಚರಣೆ ಮಾಡುತ್ತಾ ದೇಹಯಾತ್ರೆ (ಜೀವನ) ನಡೆಸುತ್ತಾನೋ (೬) |
| ಸಃ ಶಾನ್ತಿಮ್ ಅಧಿಗಚ್ಛತಿ | ಅವನು (ಆತ್ಮದರ್ಶನವನ್ನು ಮುಂದೆ ಪಡೆಯುವವನಾಗಿ) ನೆಮ್ಮದಿಯಾಗಿರುತ್ತಾನೆ ॥ |

(ನಿತ್ಯವಸ್ತುವಾದ ತನ್ನ ಆತ್ಮದಲ್ಲಿ ಯಥಾವತ್ತಾದ ಜ್ಞಾನಪೂರ್ವಕವಾಗಿ ಆಸಕ್ತನಾದವನೇ ನಿಜವಾದ ಮಾನವ(೧). ಅವನು(೨)(೩)(೪)(೫)(೬)ರಲ್ಲಿ ಹೇಳಿರುವಂತೆ ಇರುವುದೆಂದರೆ ಕರ್ಮಯೋಗಿಯಾಗುವುದು. ಆದ್ದರಿಂದ ಜ್ಞಾನಯೋಗಿ ಪಡೆಯುವ ಗುರಿಯನ್ನೇ ಕರ್ಮಯೋಗಿ ಶೀಘ್ರಮುಟ್ಟುತ್ತಾನೆಂದು ಭಾವ. ಸಾಮಾನ್ಯ ಪಾಮರನೂ 'ಅಮೃತತ್ವ'ವೆಂಬ ಧ್ಯೇಯದ ಕಡೆ ನಡೆದು ಗುರಿಮುಟ್ಟಬಲ್ಲ ಸುಲಭ ಸುಕ್ಷೇಮ ಮಾರ್ಗ ಇದು ಎಂದು ಶ್ರೀ ಕರುಣಾಳು ಅನುಗ್ರಹಿಸುತ್ತಿದ್ದಾನೆ)

## ಸಾಂಖ್ಯಬುದ್ಧಿ - ಯೋಗಬುದ್ಧಿಗಳ ಸಾರಾಂಶ

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ! ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮ ನಿರ್ವಾಣಮೃಚ್ಛತಿ ॥೭೨॥**

| | |
|---|---|
| ಪಾರ್ಥ ! | ಪೃಥಾಸುತನೇ ! |
| ಏಷಾ | ಈ (ನಿತ್ಯಾತ್ಮಜ್ಞಾನದ ಹಿನ್ನಲೆಯುಳ್ಳ) |

| | |
|---|---|
| ಸ್ಥಿತಿಃ | (ಅಸಂಗ ಕರ್ಮದಲ್ಲಿ ನೆಲೆಸಿರುವಿಕೆಯು) ನಿಷ್ಠೆಯು |
| ಬ್ರಾಹ್ಮೀ । | ಬ್ರಹ್ಮ (ಆತ್ಮಸ್ವರೂಪ)ವನ್ನು ಪಡೆಯುವಂತೆ ಮಾಡುವಂತಹದು । |
| ಏನಾಂ ಪ್ರಾಪ್ಯ | ಈ ಸ್ಥಿತಿಯನ್ನು ಕೈಗೂಡಿಸಿಕೊಂಡ ಮೇಲೆ |
| ನಮುಹ್ಯತಿ | (ಜನ್ಮಮರಣಚಕ್ರಕ್ಕೆ ಜಾರಿ ಬೀಳುವ) ಮರುಳನಾಗುವುದಿಲ್ಲ। |
| | (ಜ್ಞಾನಿಯೋಗಿಯಂತೆ ಪ್ರಣಾಶದ ಕಡೆಗೆ ಜಾರುವುದೂ ಇಲ್ಲ)। |
| ಅಸ್ಯಾಂ | ಈನೆಲೆಯಲ್ಲಿ |
| ಅನ್ತಕಾಲೇಽಪಿ | ಇಳಿ ವಯಸ್ಸಿನಲ್ಲಾದರೂ ಸರಿ |
| ಸ್ಥಿತ್ವಾ | ಭದ್ರವಾಗಿ ನಿಂತರೆ |
| ನಿರ್ವಾಣಂ ಬ್ರಹ್ಮ | ಆನಂದಮಯವಾದ ಆತ್ಮಸ್ವರೂಪವನ್ನು |
| ಋಚ್ಛತಿ | ಪಡೆಯುತ್ತಾನೆ ॥ |

(ಇಲ್ಲಿ ಪರಮಾತ್ಮನ ವಾತ್ಸಲ್ಯ ದಡಮೀರಿ ಹರಿದಿದೆ. ವಿಸ್ತೃತ ವ್ಯಾಖ್ಯಾನದಲ್ಲಿ ಇದರ ಬಗ್ಗೆ ಕಿಂಚಿದ್ ವೇದ್ಯ)

(ವಿಸ್ತೃತ ವಾಖ್ಯಾನದ 'ಹೆಸರು 'ಲೋಕಹಿತೈಷಿಣೀ ಚಂದ್ರಿಕಾ ವಿಹಾರ')

॥ ಇತೀ ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ॥

# ಅಥ ತೃತೀಯೋಽಧ್ಯಾಯಃ ॥ ೪೩ ಶ್ಲೋ ॥

## (ಭೀಷ್ಮ ಪರ್ವದಲ್ಲಿ ೨೭ ನೆಯ ಅಧ್ಯಾಯ)

### ಅರ್ಜುನ ಉವಾಚ

**ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ ಜನಾರ್ದನ ।**
**ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ! ॥೧॥**

ಜನಾರ್ದನ ! ಕರ್ಮಣಃ ಬುದ್ಧಿಃ ಜ್ಯಾಯಸೀ
ತೇ ಮತಾ ಚೇತ್, ತತ್ ಘೋರೇ
ಕರ್ಮಣಿ ಮಾಂ ಕಿಂ ನಿಯೋಜಯಸಿ ?

ಕೃಷ್ಣ ! ಕರ್ಮಕ್ಕಿಂತ ಬುದ್ಧಿಯು ಮಿಗಿಲಾಗಿ
ನಿನಗೆ ಸಂಮತವಾಗಿದ್ದರೆ, ಆಗ ಘೋರವಾಗಿರುವ
ಕರ್ಮಕೋಟಲೆಯಲ್ಲಿ ನನ್ನನ್ನೇಕೆ ನೂಕುತ್ತೀಯೆ ?

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ, ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥**

ವ್ಯಾಮಿಶ್ರೇಣ ಇವ
ವಾಕ್ಯೇನ ಮೇ ಬುದ್ಧಿಂ
ಮೋಹಯಸೀವ

ಕಲಸಿಹೋಗಿದೆಯೋ ಎಂಬಂತೆ ಕಾಣುವ
ಮಾತಿನಿಂದ ನನ್ನ ಬುದ್ಧಿಯನ್ನು
ಕಲಕುತ್ತಿದ್ದೀಯೋ ಎಂಬಂತೆ ಭಾಸವಾಗುತ್ತಿದೆ !

ತತ್ ಏಕಂ ವದ — ಅಂತಹ ಒಂದು ಮಾತನ್ನು ಹೇಳು
ಯೇನ ನಿಶ್ಚಿತ್ಯ ಅಹಂ — ಯಾವುದರಿಂದ ನಿಶ್ಚಯಹೊಂದಿ ನಾನು
ಶ್ರೇಯಃ ಆಪ್ನುಯಾಮ್ — ಶ್ರೇಯಸ್ಸನ್ನು ಪಡೆಯುಬಲ್ಲವನಾಗುತ್ತೇನೆ ॥

ಆತ್ಮದ ನಿತ್ಯತ್ವಾದಿ ನಿಶ್ಚಯ ಬುದ್ಧಿ, ಇಂದ್ರಿಯ ನಿಗ್ರಹ, ಮನಸಾ ಆತ್ಮದರ್ಶನ ಎಂದೆಲ್ಲ ಕೇಳಿ ಪಾಶುಪತಾಸ್ತ್ರಕ್ಕಾಗಿ ತಪಸ್ಸು ಮಾಡಿದಂತೆ, ಆತ್ಮಕ್ಕಾಗಿ ಮನಸ್ಸನ್ನು ಸಮಾಧಿ ಸ್ಥಿತಿಗೆ ತರುವ ಕೆಲಸವೇ, ಮೇಲೆಂದು ಕೃಷ್ಣನ ಮಾತಿನ ಅಭಿಪ್ರಾಯವನ್ನು, ತನ್ನ ಮನಸ್ಸಿನ ಬಣ್ಣಕ್ಕನುಗುಣವಾಗಿ ಗ್ರಹಿಸಿದ ಅರ್ಜುನನು, 'ತಸ್ಮಾದ್ಯುಧ್ಯಸ್ವ' 'ಉತ್ತಿಷ್ಠ ಕೌನ್ತೇಯ ಯುದ್ಧಾಯ ಕೃತ ನಿಶ್ಚಯಃ' ಎಂಬಂತಹ ಶ್ರೀ ಕೃಷ್ಣನ ಮಾತುಗಳನ್ನೂ ಜ್ಞಾಪಿಸಿಕೊಂಡು, ಸಮಂಜಸವಾಗುವಂತೆ ಹೀಗೇ ಮಾಡು ಎಂದು ಹೇಳು ಎಂಬುದಾಗಿ ಕೇಳಿಕೊಳ್ಳುತ್ತಿದ್ದಾನೆ. ಜೊತೆಗೆ 'ನಿನ್ನ ಮಾತಿನಿಂದ ಒಂದು ನಿಶ್ಚಯಕ್ಕೆ ಬಂದು ನಾನು ಶ್ರೇಯಸ್ಸನ್ನು ಪಡೆಯುವೆನೆಂಬ ನೆಮ್ಮದಿಯುಂಟಾಗಲಿ' ಎಂದು ಕೋರುತ್ತಾನೆ ॥

ಶ್ರೀ ಭಗವಾನುವಾಚ

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ! ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥ ೩ ॥**

ಪುರಾ, ಅಸ್ಮಿನ್ ಲೋಕೇ, — ಈ ಮೊದಲು, ಈ ಮರ್ತ್ಯಲೋಕದಲ್ಲಿ
ದ್ವಿವಿಧಾ ನಿಷ್ಠಾ, ಮಯಾ — ಎರಡು ವಿಧವಾದ ನಿಷ್ಠೆಯು, ನನ್ನಿಂದ

| | |
|---|---|
| ಪ್ರೋಕ್ತಾ ಅನಘ! । | ಸ್ಪಷ್ಟೀಕರಿಸಲ್ಪಟ್ಟಿತು ಪಾಪರಹಿತನೇ! । ಅದೇನೆಂದರೆ |
| ಸಾಂಖ್ಯಾನಾಂ ಜ್ಞಾನಯೋಗೇನ । | ಆತ್ಮ ಧ್ಯಾನ ಸಮರ್ಥರಿಗೆ ಜ್ಞಾನಯೋಗದಿಂದ ಸ್ಥಿತಿ । |
| ಯೋಗಿನಾಂ ಕರ್ಮಯೋಗೇನ । | ಆತ್ಮೇತರ ವಿಷಯದಲ್ಲಿ ಚಿತ್ತಸಂಚರಿಸಿದರೂ ಸಮಚಿತ್ತವುಳ್ಳವರಿಗೆ ಕರ್ಮಯೋಗದಿಂದ ಸ್ಥಿತಿ ॥ |

(ಇನ್ದ್ರಿಯಜಯ ಯಾರಿಗೆ ಸಹಜ ಸುಲಭವೋ ಅವರಿಗೆ ಜ್ಞಾನನಿಷ್ಠೆ। ಇನ್ದ್ರಿಯಜಯ ಸುಲಭವಲ್ಲದವರಿಗೆ ಕರ್ಮ ನಿಷ್ಠೆ)

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

| | |
|---|---|
| ಕರ್ಮಣಾಮ್ ಅನಾರಂಭಾದೇವ | ವಿಹಿತ ಕರ್ಮಗಳನ್ನು ಮಾಡದೇ ಇದ್ದ ಮಾತ್ರದಿಂದಲೇ |
| ಪುರುಷಃ ನೈಷ್ಕರ್ಮ್ಯಂ | ಸಾಧಕನು ಕರ್ಮಮುಗಿದ ಸ್ಥಿತಿಯಲ್ಲಿ ಬರುವ ಜ್ಞಾನನಿಷ್ಠೆಯನ್ನು |
| ನಾಶ್ನುತೇ । ಸಂನ್ಯಸನಾದೇವ | ಹೊಂದಿ ಬಿಡುವುದಿಲ್ಲ । ಆರಬ್ಧವಾದ ಕರ್ಮಗಳನ್ನು ಬಿಟ್ಟು (ವರ್ಣಾಶ್ರಮ ಕರ್ತವ್ಯ ತ್ಯಾಗ ಮಾಡಿ) ತಪಸ್ಸಿಗೆ ಹೊರಟಂತೆ ಹೊರಟ ಮಾತ್ರದಿಂದಲೇ, |
| ಸಿದ್ಧಿಂ ನ ಸಮಧಿಗಚ್ಛತಿ । | ಜ್ಞಾನನಿಷ್ಠಾಸಿದ್ಧಿಯನ್ನು ಪಡೆದು ಬಿಡುವುದಿಲ್ಲ । |

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತಃ ಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫॥**

| | |
|---|---|
| ಕಶ್ಚಿತ್ ಜಾತು ಕ್ಷಣಮಪಿ ಅಕರ್ಮಕೃತ್ | ಯಾರೂ ಯಾವಾಗಲೂ ಕ್ಷಣ ಕಾಲವೂ ಕೆಲಸ ಮಾಡದವನಾಗಿ |
| ನತಿಷ್ಠತಿ। ಹಿ।, ಸರ್ವಃ, ಪ್ರಕೃತಜೈಃ ಗುಣೈಃ | ಇರುವುದೇ ಇಲ್ಲ । ಏಕೆಂದರೆ, ಪ್ರತಿಯೊಬ್ಬನೂ, ಪ್ರಕೃತಿ ಯಲ್ಲಿ ಬೆಳೆದುನಿಂತ ಸತ್ತ್ವರಜಸ್ತಮೋಗುಣಗಳಿಂದ |
| ಅವಶಃ ಕರ್ಮಕಾರ್ಯತೇ | ಪರವಶನಾಗಿ ಕೆಲಸ ಮಾಡಿಸಲ್ಪಡುತ್ತಾನೆ ॥೫॥ |

(ಪ್ರಾಕೃತ ಶರೀರಿಯಾದ ಎಲ್ಲ ಬದ್ಧಾತ್ಮನೂ ಪ್ರಕೃತಿವಶವಾಗಿ ಕರ್ಮಮಾಡೇ ಮಾಡುತ್ತಾನೆ)

**ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ,ಮನಸಾ ಸ್ಮರನ್ ।**
**ಇನ್ದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥**

| | |
|---|---|
| ಯಃ ಕರ್ಮೇನ್ದ್ರಿಯಾಣಿ ಸಂಯಮ್ಯ, | ಯಾವಾತನು ಕರ್ಮೇನ್ದ್ರಿಯಗಳನ್ನು ಕಟ್ಟಿಹಾಕಿ, |
| ಇನ್ದ್ರಿಯಾರ್ಥಾನ್ ಮನಸಾಸ್ಮರನ್ | ಇಂದ್ರಿಯ ವಿಷಯಗಳನ್ನು (ಇಂದ್ರಿಯಗಳಿಗೆ ಕೊಡದೆ) |
| ಆಸ್ತೇ, | ಮನಸ್ಸಿನಿಂದ ಸ್ಮರಿಸುತ್ತಾ ಇರುತ್ತಾನೋ, |

ಸ ವಿಮೂಢಾತ್ಮಾ । ಮಿಥ್ಯಾಚಾರಃ ಉಚ್ಯತೇ

ಅವನ್ನು ತಾನು ಸಂಯಮಿ ಎಂದು ತನ್ನನ್ನೇ ಭ್ರಮಿಸಿದ್ದಾನೆ। 'ಕಪಟಾಚಾರೀ' ಎಂದು ಕರೆಯಲ್ಪಡುತ್ತಾನೆ ॥

**ಯಸ್ತ್ವಿನ್ದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇನ್ದ್ರಿಯೈಃ ಕರ್ಮಯೋಗಮ್ ಅಸಕ್ತಃ ಸ ವಿಶಿಷ್ಯತೇ ॥೭॥**

ಯಃತು ಇನ್ದ್ರಿಯಾಣಿ ಮನಸಾ ನಿಯಮ್ಯ ಕರ್ಮೇನ್ದ್ರಿಯೈಃ ಕರ್ಮಯೋಗಂ, ಅಸಕ್ತಃ ಆರಭತೇ, ಸ ವಿಶಿಷ್ಯತೇ ॥

ಯಾವಾತನಾದರೋ ಜ್ಞಾನೇಂದ್ರಿಯಗಳನ್ನು ಮನಸಾ ಹತೋಟಿಯಲ್ಲಿಟ್ಟು, ಕರ್ಮೇನ್ದ್ರಿಯಗಳಿಂದ ಕರ್ಮ ಯೋಗವನ್ನು, ಸಂಗತ್ರಯತ್ಯಾಗ ಮಾಡಿ ಆರಂಭಿಸುತ್ತಾನೋ, ಅವನು ಜ್ಞಾನಯೋಗಾರಂಭಿಗಿಂತಲೂ ಉತ್ತಮ॥

**ನಿಯತಂ ಕರು ಕರ್ಮ ತ್ವಂ ಕರ್ಮಜ್ಯಾಯೋಹಿ+ಅಕರ್ಮಣಃ ।**
**ಶರೀರಯಾತ್ರಾಪಿ ಚತ ನ ಪ್ರಸಿದ್ಧ್ಯೇದ ಕರ್ಮಣಃ ॥೮॥**

ನಿಯತಂ ಕರ್ಮ ಕುರು ೮ ಹಿ, ಅಕರ್ಮಣಃ ಕರ್ಮಜ್ಯಾಯಃ। ಅಕರ್ಮಣಃ ಶರೀರಯಾತ್ರಾಪಿಚ ನಪ್ರಸಿದ್ಧ್ಯೇತ್

ಶಾಸ್ತ್ರನಿಯತವಾದ ಕರ್ಮವನ್ನು ನೀನು ಮಾಡಲೇಬೇಕು। ಏಕೆಂದರೆ, ಜ್ಞಾನನಿಷ್ಠೆಗಿಂತಲೂ ಕರ್ಮನಿಷ್ಠೆ ಶ್ರೇಷ್ಠ। ಜ್ಞಾನಯೋಗಕ್ಕಾಗಿ ಕರ್ಮತ್ಯಾಗಿಗೆ ದೇಹಧಾರಣೆಯೂ ಶಾಸ್ತ್ರೀಯವಾಗಿ ನಡೆಯಲಾರದು ॥೮॥

**ಯಜ್ಞಾರ್ಥಾತ್ ಕರ್ಮಣೋऽನ್ಯತ್ರ ಲೋಕೋऽಯಂ ಕರ್ಮಬನ್ಧನಃ ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಙ್ಗಃ ಸಮಾಚಾರ ॥೯॥**

| | |
|---|---|
| ಯಜ್ಞಾರ್ಥಾತ್ | ಯಜ್ಞಾದಿ ಶಾಸ್ತ್ರವಿಹಿತ ಕರ್ಮ ನಿರ್ವಾಹಕ್ಕಾಗಿಯೇ ಮಾಡಲ್ಪಡುವ |
| ಕರ್ಮಣಃ ಅನ್ಯತ್ರ,, | ದ್ರವ್ಯಾರ್ಜನೆ ಮುಂತಾದ ಕರ್ಮಗಳಿಗಿಂತಲೂ ಇತರ ರೀತಿಯ ಕರ್ಮಗಳಲ್ಲಿ, |
| ಅಯಂ ಲೋಕಃ ಕರ್ಮಬನ್ಧನಃ । | ಈ ಲೋಕವು ಕರ್ಮವನ್ನೇ ಸಂಕೋಲೆಯಾಗಿಸುತ್ತದೆ. |
| ತದರ್ಥಂ ಕರ್ಮ, | (ಆದ್ದರಿಂದ) ಯಜ್ಞಾರ್ಥವಾಗಿಯೇ ದ್ರವ್ಯಾದಿ ಸಂಪಾದಿಸುವ ಕರ್ಮಗಳನ್ನು |
| ಮುಕ್ತಸಙ್ಗಃ, | ತನಗಾಗಿ ಮತ್ತೊಬ್ಬರಿಗಾಗಿ ಎಂಬ ಮನೋಭಾವದ ಸಂಗ |
| ಸಮಾಚರ ॥ | ಇಲ್ಲದೆ, ಚೆನ್ನಾಗಿಯೇ ಮಾಡು ॥ |

(ಶಾಸ್ತ್ರೀಯಕರ್ಮಾಚರಣೆ ಯಜ್ಞವೇ । ಯಜ್ಞವೆಂದರೆ ವಿಶ್ವಪತಿಯ ಪೂಜೆ । ತದಂಗವಾಗಿ ರಾಜ್ಯ ಸಂಪಾದನೆ ದ್ರವ್ಯ ಸಂಪಾದನೆ ಇತ್ಯಾದಿ। ತನ್ನವರ ಮತ್ತು ತನ್ನ ಭೋಗಕ್ಕಾಗಿ ಐಶ್ವರ್ಯ ಎಂಬ ಭಾವ, ಬಂಧಕ, ಎಂದರೆ ಪಾಪಕರ । ಊಟ ಮೊದಲ್ಗೊಂಡು ಎಲ್ಲ ಲೌಕಿಕ ಕರ್ಮಗಳ ಹಿಂದೆ ಯಜ್ಞಾರ್ಥವೆಂಬ ಪ್ರಾಮಾಣಿಕ ಭಾವ ಬರಬೇಕು ಕರ್ಮಯೋಗದಲ್ಲಿ ॥)

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮ್ ಏಷವೋಽಸ್ತ್ವಿಷ್ಟಕಾಮಧುಕ್ ॥೧೦॥**

ಪುರಾ ಪ್ರಜಾಪತಿಃ, — ಹಿಂದೆ ಸೃಷ್ಟಿಕಾಲದಲ್ಲಿ ವಿಶ್ವಸ್ರಷ್ಟವಾದ ಶ್ರೀಮನ್ನಾರಾಯಣನು,
ಪ್ರಜಾಃ ಸಹಯಜ್ಞಾಃ — ಬದ್ಧಚೇತನಗಳನ್ನು ಶಾಸ್ತ್ರೀಯ ಕರ್ತವ್ಯಗಳ
ಸೃಷ್ಟ್ವಾ, — ಜೊತೆಯೇ ಸೃಷ್ಟಿಸಿ, ಎಂದರೆ ದೇಹದಾರಿಗಳನ್ನಾಗಿ ಮಾಡಿ
ಉವಾಚ - ''ಏಷಃವಃ — ಹೇಳಿದನು-''ಈ ಯಜ್ಞವೆಂಬುದು (ಎಂದರೆ ಶಾಸ್ತ್ರೀಯ ಕರ್ಮ)
ಇಷ್ಟ - ಕಾಮ+ದುಕ್ ಅಸ್ತು । — ನಿಮಗೆ ಇಷ್ಟವಾದ ಪುರುಷಾರ್ಥಗಳನ್ನೆ ಹಾಲಿನಂತೆ ಕರೆಯುವ ಧೇನುವಾಗಲಿ ।

(ಮನುಷ್ಯಾದಿ ಸೃಷ್ಟಿಯು, ಚೇತನನು ತನ್ನ ಕರ್ತವ್ಯವನ್ನು ಪರಮಾತ್ಮನ ಆರಾಧನೆಯೆಂಬ ಭಾವದಿಂದ ಮಾಡುವುದಕ್ಕಾಗಿಯೇ, ಎಂದು ಇದರಿಂದ ಸ್ಪಷ್ಟ)

**ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ ।**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**

ಅನೇನ, — ಈ ಯಜ್ಞದಿಂದ (ಎಂದರೆ ಪರಮದೇವತಾರಾಧನ ರೂಪ ಶಾಸ್ತ್ರೀಯ

| | |
|---|---|
| ದೇವಾನ್ ಭಾವಯತ | ಕರ್ಮದಿಂದ), (ಸನ್ನಿಹಿತವಾಗಿ ಉಳ್ಳ) ದೇವತೆಗಳನ್ನು ಆರಾಧಿಸಿರಿ । |
| ತೇ ದೇವಾಃ ವಃ | ಹಾಗೆ ಆರಾಧಿತರಾದ ದೇವತೆಗಳು ಆರಾಧಕರಾದ ನಿಮ್ಮನ್ನು |
| ಭಾವಯನ್ತು । | ಅನ್ನಾದಿ ಅಪೇಕ್ಷಿತಗಳನ್ನು ಕೊಟ್ಟು ಪೋಷಿಸಲಿ । |
| ಪರಸ್ಪರಂ ಭಾವಯನ್ತಃ | (ಈ ರೀತಿ) ಪರಸ್ಪರ ಸಂತೋಷಪಡಿಸುತ್ತಾ |
| ಪರಂ ಶ್ರೇಯಃ ಅವಾಪ್ಸ್ಯಥ | 'ಅಮೃತತ್ತ್ವ'ವೆಂಬ ಪರಮ ಪುರುಷಾರ್ಥವನ್ನು ಇಬ್ಬರೂ ಹೊಂದಿರಿ. |

(ಸುರ-ನರರು ಪರಸ್ಪರ ಸಂತೋಷಪಡಿಸುವುದು, 'ಯಜ್ಞ'- ಪರಮ ಪುರುಷನ ಆರಾಧನೆ। ಈ ಭಾವವು ದೃಢವಾಗಿ, ಜೀವನದ ಕರ್ತವ್ಯಗಳು ನಡೆದರೆ, ಇಬ್ಬರಿಗೂ ಅಮೃತತ್ತ್ವ ಸಿದ್ಧಿ- ಈ ಕರ್ಮಯೋಗದಿಂದ)

**ಇಷ್ಟಾನ್ ಭೋಗಾನ್ ಹಿ ವೋ ದೇವಾಃ ದಾಸ್ಯನ್ತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ॥೧೨॥**

| | |
|---|---|
| ಯಜ್ಞಭಾವಿತಾಃ ದೇವಾಃ ಇಷ್ಟಾನ್ ಭೋಗಾನ್ ವಃ ದಾಸ್ಯನ್ತೇ । | ಯಜ್ಞದಿಂದ ಆರಾಧಿತರಾದ ದೇವತೆಗಳು (ಉತ್ತರೋತ್ತರ ಆರಾಧನಕ್ಕೆ ಬೇಕಾದ) ಇಷ್ಟ ಭೋಗಗಳನ್ನು ನಿಮಗೆ ಕೊಡುತ್ತಾರೆ । |

| | |
|---|---|
| ತೈಃದತ್ತಾನ್ ಏಭ್ಯಃ ಅಪ್ರದಾಯ ಯೋಭುಙ್ಕ್ತೇಸಃ ಸ್ತೇನ ಏವ। | ಅವರಿಂದ ಕೊಡಲ್ಪಟ್ಟದ್ದನು ಅವರಿಗೆ ಸಮರ್ಪಿಸದೆ ಯಾವಾತನು ಭುಜಿಸುತ್ತಾನೋ, ಅವನು ಕಳ್ಳನೇ ಸಂಶಯವಿಲ್ಲ। |

**ಯಜ್ಞಶಿಷ್ಟಾಶಿನಃ ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ।**
**ಭುಞ್ಜತೇ ತೇತ್ವಘಂ ಪಾಪಾಃ ಯೇ ಪಚನ್ತ್ಯಾತ್ಮ ಕಾರಣಾತ್ ॥೧೩॥**

| | |
|---|---|
| ಯಜ್ಞಶಿಷ್ಟಾಶಿನಃ | ಯಜ್ಞರೂಪ ಪರಮಪುರುಷಾರಾಧನಕ್ಕಾಗಿ ಉಪಯೋಗಿಸಿದ ಪ್ರಸಾದವನ್ನು |
| ಸನ್ತಃ | ಮಾತ್ರವೇ ಭುಜಿಸುವವರಾಗಿ ಶರೀರಧಾರಣೆ ಮಾಡಿಕೊಂಡು ಬಾಳುವವರು |
| ಸರ್ವಕಿಲ್ಬಿಷೈಃ ಮುಚ್ಯನ್ತೇ। | (ಆತ್ಮಾವಲೋಕನ ವಿರೋಧಿಯಾದ) ಪೂರ್ವಾರ್ಜಿತ ಪುಣ್ಯ ಪಾಪವೆಂಬ ಎಲ್ಲ ಕಶ್ಮಲಗಳಿಂದಲೂ ಮುಕ್ತರಾಗುತ್ತಾರೆ। |
| ಯೇತು ಆತ್ಮಕಾರಣಾತ್ ಪಚನ್ತಿ, | ಯಾರು ತಮಗೋಸ್ಕರ ಎಂದು ಬೇಯಿಸಿ |
| ತೇಪಾಪಾಃ ಅಘಂಭುಞ್ಜತೇ। | ಭುಜಿಸುತ್ತಾರೋ, ಆ ಪಾಪಿಗಳು ಪಾಪವನ್ನು ತಿನ್ನುತ್ತಾರೆ। |

(ಶ್ರೀ ಭಗವದಾರಾಧನ ಪ್ರಸಾದವಲ್ಲದ್ದನ್ನು ತಿಂದು ಶರೀರ ಪೋಷಣೆ ಮಾಡಿಕೊಳ್ಳುವವರು ತಮ್ಮ ಪ್ರತಿಯೊಂದು ತುತ್ತಿನಿಂದಲೂ ನರಕಗಳಿಗೆ ಹೋಗಲು ಪಾಪದ ಬುತ್ತಿ ಕಟ್ಟುತ್ತಿರುತ್ತಾರೆ ಎಂದು ಭಾವ)

ಅನ್ನಾದ್ ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ ಭವತಿ ಪರ್ಜನ್ಯಃ ಯಜ್ಞಃ ಕರ್ಮಸಮುದ್ಭವಃ ॥೧೪॥

ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।
ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥

| | |
|---|---|
| ಭೂತಾನಿ ಅನ್ನಾದ್ ಭವನ್ತಿ । | ಶರೀರಧಾರಿ ಚೇತನಗಳು ಅನ್ನಪಾನಾದಿಗಳಿಂದ ತೃಪ್ತರಾಗುತ್ತಾರೆ । |
| ಅನ್ನಸಂಭವಃ ಪರ್ಜನ್ಯಾತ್ | ಅನ್ನಪಾನಸಮೃದ್ಧಿ ಮಳೆಕೊಡುವ ದೇವತೆಯಿಂದ । |
| ಪರ್ಜನ್ಯಃ ಯಜ್ಞಾದ್ಭವತಿ । | ಮಳೆಯ ದೇವತೆಯು ಯಜ್ಞದಿಂದ ತೃಪ್ತನಾಗುತ್ತಾನೆ । |
| ಯಜ್ಞಃ ಕರ್ಮಸಮುದ್ಭವಃ । | ಯಜ್ಞವು ದ್ರವ್ಯಾರ್ಜನ ಪಚನ-ಹೋಮಾದಿ ಕರ್ಮಗಳಿಂದಾಗುತ್ತದೆ । |
| ಕರ್ಮ ಬ್ರಹ್ಮೋದ್ಭವಂ ವಿದ್ಧಿ । | ಸಾಮಗ್ರೀಸಂಪಾದನಯಜನಾದಿ ಕರ್ಮಗಳು ಶರೀರರೂಪ ಪ್ರಕೃತಿಯಿಂದಾಗುತ್ತದೆ ಎಂದು ತಿಳಿ । |
| ಬ್ರಹ್ಮ ಅಕ್ಷರಸಮುದ್ಭವಂ | ಶರೀರ ರೂಪಪ್ರಕೃತಿಯು ಅನ್ನಪಾನಾದಿತೃಪ್ತ ಚೇತನನಿಂದಲೇ ವಿಹಿತ ಕರ್ಮಾಚರಣ ಸಮರ್ಥವಾಗಿ ನಡೆಸಲ್ಪಡುವುದು. |

ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್=ಆದ್ದರಿಂದ ಎಲ್ಲರಿಗಿರುವ ಪ್ರಾಕೃತ ಶರೀರವು ನಿತ್ಯವೂ ಯಜ್ಞಾಧಾರಿತವಾಗಿದೆ ।
(ತೃಪ್ತ ಚೇತನನಿಂದ→ಪ್ರಾಕೃತಶರೀರ→ಕರ್ಮಕಲಾಪ→ಯಜ್ಞ→ಪರ್ಜನ್ಯ→ಅನ್ನ→ತೃಪ್ತಚೇತನ ಹೀಗೆ ಯಜ್ಞವೇ ಪ್ರಧಾನವಾಗಿರುವ ಚಕ್ರವಿದು 'ಯಜ್ಞಚಕ್ರ'ವೆನಿಸುತ್ತದೆ)

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿನ್ದ್ರಿಯಾರಾಮಃ ಮೋಘಂ ಪಾರ್ಥ! ಸ ಜೀವತಿ ॥೧೬॥**

| | |
|---|---|
| ಏವಂ ಪ್ರವರ್ತಿತಂ ಚಕ್ರಂ | ಈ ರೀತಿ ಪರಮಪುರುಷನಿಂದ ಪ್ರವರ್ತಿಸಲ್ಪಟ್ಟ ಚಕ್ರವನ್ನು |
| ಇಹಯಃ ನಾನುವರ್ತಯತಿ | ಈ ಲೋಕದಲ್ಲಿ ಹುಟ್ಟಿ ಯಾವ ಮಾನವನು ಉರುಳಿಸುತ್ತಾ ಮುಂದುವರಿಸುವುದಿ |
| ಸಃ ಅಘಾಯುಃ । | ಲ್ಲವೋ ಅವನು ಪಾಪದಿಂದ ರಚಿತವಾದ ಮತ್ತು ಪಾಪವೃದ್ಧಿ ಮಾಡುವ, ಜೀವಮಾನವುಳ್ಳವನು । |
| ಇನ್ದ್ರಿಯಾರಾಮಃ । | ಆದ್ದರಿಂದಲೇ ಆತ್ಮಾರಾಮನಲ್ಲ ಇನ್ದ್ರಿಯಾರಾಮ (ಇನ್ದ್ರಿಯವಿಹಾರಿ) । ತಾತ್ವಿಕ |
| ಮೋಘಮ್ ಪಾರ್ಥ ! | ಪುರುಷಾರ್ಥವಿಲ್ಲದ ವ್ಯರ್ಥವಾಗಿ ಪಾರ್ಥ! |
| ಸಃಜೀವತಿ | ಅವನು (ಪ್ರಾಣಯಂತೆ) ಉಸಿರಾಡುತ್ತಿರುವುದು । |

**ಯಸ್ತ್ವಾತ್ಮರತಿರೇವಸ್ಯಾತ್ ಆತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನವಿದ್ಯತೇ ॥೧೭॥**

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥**

| | |
|---|---|
| ಯಃ, ಮಾನವಃ, | ಯಾವ ಮಹಾನುಭಾವನು, ಮಾನವದೇಹಿಯಾಗಿದ್ದರೂ, |
| ಆತ್ಮರತಿರೇವ ಸ್ಯಾತ್, | ಸಹಜವಾಗಿ ಆತ್ಮದಲ್ಲೇ ರಮಿಸುವವನಾಗಿರುತ್ತಾನೋ, |
| ಆತ್ಮತೃಪ್ತಶ್ಚ | (ಅನ್ನಪಾನಗಳ ಅಪೇಕ್ಷೆಯಿಲ್ಲದೆ) ಆತ್ಮದಿಂದಲೇ ತೃಪ್ತನಾಗಿರುತ್ತಾನೋ, |
| ಆತ್ಮನ್ಯೇವ ಚ ಸನ್ತುಷ್ಟಃ, | (ಉದ್ಯಾನ-ಪುಷ್ಪಮಾಲೆ-ಚಂದನ-ಗೀತ-ನೃತ್ಯಾದಿಗಳಿಗೆ ಬದಲು) ಆತ್ಮದಲ್ಲೇ ಅಧಿಕ ವಿನೋದ ಕಾಣುತ್ತಾನೋ, |
| ತಸ್ಯ ಕಾರ್ಯಂ | ಅವನಿಗೆ ಯಜ್ಞಚಕ್ರ ನಡೆಸುವ ಕರ್ತವ್ಯ |
| ನ ವಿದ್ಯತೇ | ಇರುವುದಿಲ್ಲ (ಯಾವ ಕರ್ತವ್ಯವೂ ಕರ್ಮವೂ ಇಲ್ಲ) |
| ತಸ್ಯ | (ಧಾರಕ-ಪೋಷಕ-ಭೋಗ್ಯಾದಿ ಎಲ್ಲವೂ ಆತ್ಮವೇ ಆಗಿರುವ) ಅವನಿಗೆ |

| | |
|---|---|
| ಇಹ ಕೃತೇನ ಅರ್ಥಃನ್ನೈವ । ಯಾವುದು | ಇಲ್ಲಿ ಶಾಸ್ತ್ರೀಯ ಕರ್ಮ ಯೋಗ-ಜ್ಞಾನಯೋಗಾದಿ ಮಾಡಿದ್ದರಿಂದಲೂ ಪ್ರಯೋಜನವಿಲ್ಲ (ಆತ್ಮಸಿದ್ಧಿಯಾಗಿರುವುದರಿಂದ) |
| ಅಕೃತೇನ ನ ಕಶ್ಚನ (ಅನರ್ಥ) । | ಮಾಡದೇ ಇರುವುದರಿಂದ ಪ್ರತ್ಯವಾಯಾದಿ ಯಾವ ಅನರ್ಥವೂ ಇಲ್ಲ (ಪಾಪಗಳು ಆತ್ಮದರ್ಶನವಾಗುತ್ತಿಲ್ಲದವನಿಗೆ ಮಾತ್ರ) |
| ನ ಚ ಅಸ್ಯ ಸರ್ವಭೂತೇಷು | ಇವನಿಗೆ ಪಾಂಚಭೌತಿಕವಾದ ಯಾವುದರಲ್ಲೂ |
| ಕಶ್ಚಿತ್ ಅರ್ಥವ್ಯಪಾಶ್ರಯಃ। | ಯಾವ ಪ್ರಯೋಜನದ ಹಂಗೂ ಇಲ್ಲ |

(ಇವನು ಹೆಸರಿಗೆ ಮಾತ್ರ ಮಾನವ, ಆದರೆ ಮುಕ್ತ ಸಮಾನನೇ)

**ತಸ್ಮಾದ್ ಅಸಕ್ತಃ ಸತತಂ ಕಾರ್ಯಂಕರ್ಮ ಸಮಾಚರ ।**
**ಅಸಕ್ತೋ ಹಿ+ ಆಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥**

| | |
|---|---|
| ತಸ್ಮಾತ್, | (ಆತ್ಮದರ್ಶನ ಮಾಡುತ್ತಿಲ್ಲದವನಿಗೆ) ಕರ್ತವ್ಯ ನಿಯಮ ಕಡ್ಡಾಯವಾದ್ದರಿಂದ, |
| ಸತತಂ ಅಸಕ್ತಃ, ಕರ್ಮ | ಯಾವಾಗಲೂ ತ್ರಿವಿಧಸಂಗರಹಿತನಾಗಿ, ವಿಹಿತ ಕರ್ಮವನ್ನು |

ಕಾರ್ಯಂ (ಇತಿ) ಸಮಾಚರ — ಬಿಡದೆ ಮಾಡಲೇಬೇಕಾದುದೆಂದು ಚೆನ್ನಾಗಿ ಆಚರಿಸು

ಅಸಕ್ತಃ ಕರ್ಮ ಆಚರನ್ ಪುರುಷಃ — ಸಂಗವಿಲ್ಲದೆ ಕರ್ಮ ಆಚರಿಸುವ ಮಾನವನು

ಪರಂ ಆಪ್ನೋತಿ, ಹಿ। — ಆತ್ಮಸ್ವರೂಪವನ್ನು ಹೊಂದಿ ಬಿಡುತ್ತಾನೆ, ಖಂಡಿತ (ಅರ್ಥಾತ್ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ)

(ಕರ್ಮಯೋಗದಿಂದಲೇ ಆತ್ಮಾವಲೋಕನಲಾಭ ಪಡೆಯುತ್ತಾನೆ । ಜ್ಞಾನಯೋಗವಿಲ್ಲದೆಯೇ)

**ಕರ್ಮಣೈವ ಹಿ ಸಂಸಿದ್ಧಿಮ್ ಆಸ್ಥಿತಾ ಜನಕಾದಯಃ ।**
**ಲೋಕಸಙ್ಗ್ರಹ ಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥೨೦॥**

(೧) ಕರ್ಮಣಾ ಏವ ಜನಕಾದಯಃ — ಕರ್ಮಯೋಗದಿಂದಲೇ (ಜ್ಞಾನಯೋಗ ಸಮರ್ಥರಾದ) ಜನಕಾದಿಗಳೂ ಕೂಡ

ಸಂಸಿದ್ಧಿಮ್ ಆಸ್ಥಿತಾಃ । ಹಿ। — ಆತ್ಮದರ್ಶನ ಸಿದ್ಧಿಯನ್ನು ಪಡೆದರೆಂಬುದು ಪ್ರಸಿದ್ಧ ।

(೨) ಲೋಕಸಂಗ್ರಹಮ್ ಏವ ಸಂಪಶ್ಯನ್ ಅಪಿ, ಕರ್ತುಮರ್ಹಸಿ — ಜನಕ್ಕೆ ಕ್ಷೇಮಕರವಾದ ಆದರ್ಶದ ಆಚರಣೆಯನ್ನೇ ಗಮನಿಸಿಯಾದರೂ, ವಿಹಿತಕರ್ಮವನ್ನೇ ನೀಮಾಡಬೇಕು ।

(ಜ್ಞಾನಯೋಗಾರ್ಹರೂ ಕೂಡ ಸೌಕರ್ಯಕ್ಕಾಗಿಯೂ ಲೋಕಕ್ಷೇಮಕ್ಕಾಗಿಯೂ ವಿಹಿತಕರ್ಮಬಿಡದೆ ಕರ್ಮ ಯೋಗಿಗಳಾಗುತ್ತಾರೆ. ನೀನು ಲೋಕಕ್ಷೇಮಕ್ಕಾಗಿಯಾದರೂ ಹಾಗೇ ಮಾಡಬೇಕು) (ನಿನ್ನ ಕ್ಷೇಮಕ್ಕೂ ಬೇರೆ ಮಾರ್ಗ ಸರಿಯಲ್ಲ)

Funding: Tattva Heritage Foundation,Kolkata. Digitization: eGangotri.

**ಯದ್ಯದಾಚರತಿ ಶ್ರೇಷ್ಠಃ ತತ್ತದೇ ವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೨೧॥**

| | |
|---|---|
| ಶ್ರೇಷ್ಠಃ | ಶಾಸ್ತ್ರಾನುಷ್ಠಾನ ಸಂಪನ್ನನೆಂದು ಪ್ರಸಿದ್ಧಿಗೆ ಬಂದವನು |
| ಯತ್ ಯತ್ ಆಚರತಿ | ಯಾವು ಯಾವುದನ್ನು ಆಚರಿಸುತ್ತಾನೋ |
| ಇತರೋ ಜನಃ ತತ್ತತ್ಏವ । | ಇತರರು (ಶಾಸ್ತ್ರಜ್ಞಾನರಹಿತರು) ಅದನ್ನೇ ಆಚರಿಸುತ್ತಾರೆ । |
| ಸಯತ್ ಪ್ರಮಾಣಂ ಕುರುತೇ, | ಆ ಶ್ರೇಷ್ಠನು ಯಾವ ಮಟ್ಟಕ್ಕೆ ಕರ್ಮಾಚರಣೆ ಮಾಡು |
| ಲೋಕಸ್ತದನುವರ್ತತೇ | ತ್ತಾನೋ, ಇತರಜನರೂ ಆ ಮಟ್ಟಕ್ಕೆ ಅನುಕರಿಸುತ್ತಾರೆ । |

(ಶಿಷ್ಟಾಗ್ರಗಣ್ಯನು ವಿಹಿತ ಕರ್ಮಗಳನ್ನು ಸಾಂಗವಾಗಿ ಮಾಡಬೇಕು। ಸಮೀಚೀನವಾಗಿ ಮಾಡಬೇಕು। ಕೆಲಭಾಗಗಳನ್ನು ಬಿಟ್ಟು ಆಚರಿಸಿದರೆ ಅಥವಾ ಅಶ್ರದ್ಧೆಯಿಂದ ಮಾಡಿದರೆ, ಇತರರೂ ಹಾಗೇ ಮಾಡುತ್ತಾರೆ ಆದರಿಂದ ಶ್ರೇಷ್ಠನಿಗೂ ಪಾಪ ಸಂಘಟನೆ! ಹಾಗಾಗಬಾರದು। )

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಞ್ಚನ ।**
**ನಾನವಾಪ್ತಮವಾಪ್ತವ್ಯಂ ವರ್ತಏವ ಚ ಕರ್ಮಣಿ ॥೨೨॥**
**ಯದಿ ಹ್ಯಹಂ ನವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮವರ್ತ್ಮಾನು ವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

**ಉತ್ಸೀದೇಯುರಿಮೇಲೋಕಾಃ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮ್ ಉಪಹನ್ಯಾಮಿಮಾಃ ಪ್ರಜಾಃ ॥೨೪॥**

| | |
|---|---|
| ಮೇ | ಸರ್ವೇಶ್ವರನೂ ಸರ್ವಜ್ಞನೂ ಆದ ನನಗೆ- |
| ತ್ರಿಷುಲೋಕೇಷು | ಮೇಲೆ-ಮಧ್ಯ-ಕೆಳಗೆ ಇರುವ ಮೂರು ಲೋಕಗಳಲ್ಲಿ ಎಲ್ಲೇ ಆದರೂ |
| ಕಿಂಚನ ಕರ್ತವ್ಯಂ ನಾಸ್ತಿ । | ಯಾವುದೂ ಸ್ವಲ್ಪವೂ ಕರ್ತವ್ಯವಿರುವುದಿಲ್ಲ, ಪಾರ್ಥ ! |
| ಅನವಾಪ್ತಮ್ ನ, ಅವಾಪ್ತವ್ಯಂ ನ । | ಹೊಂದಲ್ಪಟ್ಟಿಲ್ಲದ್ದು, ಹೊಂದಲ್ಪಡಲು ಯೋಗ್ಯವಾದದ್ದು ಒಂದೂ ಇಲ್ಲ । |
| ಚ, ಕರ್ಮಣಿವರ್ತೇ ಏವ । | ಆದರೂ, ಕರ್ಮದಲ್ಲಿ ಬಿಡದೆ ನಿಷ್ಠನಾಗಿದ್ದಾನೆ । |
| ಯದಿ ಜಾತು ಅಹಂ | ಒಂದು ವೇಳೆ ನಾನು, ಯಾವಾಗಲಾದರೂ, |
| ಅತನ್ದ್ರಿತಃ ಕರ್ಮಣಿನವರ್ತೇಯಂ, | ಉದಾಸೀನತೆ ಇಲ್ಲದೆ ಕರ್ಮದಲ್ಲಿ ತೊಡಗಿರದಿದ್ದರೆ |
| ಮನುಷ್ಯಾಃ | (ಶಾಸ್ತ್ರಜ್ಞಾನ ಸರಿಯಾಗಿ ಪಡೆಯದ) ಸಾತ್ತ್ವಿಕಮಾನವರು |
| ಸರ್ವಶಃ ಮಮವರ್ತ್ಮ | ಸರ್ವಪ್ರಕಾರದಿಂದಲೂ ನನ್ನ ಮಾರ್ಗವನ್ನೇ |
| ಅನುವರ್ತಂತೇ । | ಅನುಸರಿಸಿ ಬಿಡುತ್ತಾರೆ . (ಇದರಿಂದ ನನಗೇನೂ ದೋಷವಿಲ್ಲ. ಅವರಿಗೆ ಅಕರಣೇ ಪ್ರತ್ಯವಾಯತಪ್ಪಿದ್ದಲ್ಲ) |
| ಅಹಂ ಕರ್ಮನಕುರ್ಯಾಂ ಚೇತ್ | ನಾನು ಕರ್ಮಮಾಡದೆಯೇ ಹೋದೆನಾದರೆ |

| | |
|---|---|
| ಇಮೇಲೋಕಾಃ ಉತ್ಸೀದೇಯುಃ । | ಈ ಶಿಷ್ಟಜನರು ವಿನಷ್ಟವಾಗಿ ಬಿಟ್ಟಾರು ॥ |
| ಸಂಕರಸ್ಯ ಚ ಕರ್ತಾ ಸ್ಯಾಮ್ | ವರ್ಣಸಙ್ಕರಕ್ಕೂ ಕಾರಕನಾಗಿಬಿಟ್ಟೇನು! |
| ಇಮಾಃ ಪ್ರಜಾಃ ಉಪಹನ್ಯಾಮ್ | ಈ ಪ್ರಜೆಗಳನ್ನೆಲ್ಲ ನಾನೇ ಹಾಳು ಮಾಡಿಬಿಟ್ಟೇನು! (ಉಪಸಂಹಾರ ಮಾಡಿ ಬಿಟ್ಟೇನು!) |

(ಹಾಗಾಗಬಾರದಾದ್ದರಿಂದ ವರ್ತೇ ಏವ ಕರ್ಮಣಿ = ಶಾಸ್ತ್ರೀಯ ಕರ್ಮ ಬಿಡದೆಯೇ ಆಚರಿಸುತ್ತೇನೆ ಯಾವಾಗಲೂ)

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವನ್ತಿ ಭಾರತ! ।
ಕುರ್ಯಾದ್ ವಿದ್ವಾಂಸ್ತಥಾಸಕ್ತಃ ಚಿಕೀರ್ಷುರ್ ಲೋಕಸಙ್ಗ್ರಹಮ್ ॥೨೫॥

| | |
|---|---|
| ಅವಿದ್ವಾಂಸಃ ಕರ್ಮಣಿಸಕ್ತಾಃ | ಆತ್ಮಜ್ಞಾನ ನಿಶ್ಚಯವಿಲ್ಲದ ಕರ್ಮಸಂಗಿಗಳು |
| ಯಥಾ ಕುರ್ವನ್ತಿ | ಹೇಗಾದರೆ (ವಿಹಿತ ಕರ್ಮಾಚರಣೆ) ಮಾಡುತ್ತಾರೋ । |
| ತಥಾ ವಿದ್ವಾನ್, ಅಸಕ್ತಃ (ಅಪಿ), | ಹಾಗೆ ಆತ್ಮಜ್ಞಾನಪಂಡಿತನು, ಕರ್ಮದಲ್ಲಿ ಮನಸ್ಸು ಅಂಟದೆ ಜ್ಞಾಯೋಗಾರ್ಹನಾಗಿದ್ದರೂ ಕೂಡ, |
| ಲೋಕಸಂಗ್ರಹಂಚಿಕೀರ್ಷುಃ | ಲೋಕಕ್ಷೇಮಕರ ಮಾರ್ಗದರ್ಶನ ಮಾಡಸಲಿಚ್ಛಿಸಿದವನಾಗಿ |
| ಕುರ್ಯಾತ್ | (ಕರ್ಮಯೋಗವನ್ನೇ) ಮಾಡಬೇಕು (ಜನಕಾದಿಗಳಂತೆ) |

**ನ ಬುದ್ಧಿ ಭೇದಂ ಜನಯೇದ್ ಅಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥೨೬॥**

| | |
|---|---|
| ವಿದ್ವಾನ್ ಅಜ್ಞಾನಾಂ ಕರ್ಮಸಂಗಿನಾಂ, | ಆತ್ಮ ಜ್ಞಾನ ಪಂಡಿತನು ಅಜ್ಞರಾಗಿ ಕರ್ಮಸಂಗಬಿಡಲಾರದ |
| ಬುದ್ಧಿಭೇದಂ, | ಪ್ರಾರಂಭಿಕ ಮುಮುಕ್ಷುಗಳಿಗೆ, (ಉದ್ಧಾರಕ್ಕೆ ಕರ್ಮ ಬಿಟ್ಟು ಬೇರೊಂದು ಮಾರ್ಗವಿರುವುದೆಂದು) ಬುದ್ಧಿಪಲ್ಲಟವಾ |
| ನ ಜನಯೇತ್ । | ಗುವಿಕೆಯನ್ನು, ಉಂಟುಮಾಡಬಾರದು । (ಮತ್ತೇ |
| ಯುಕ್ತಃ | ನು ಮಾಡಬೇಕೆಂದರೆ) ಕರ್ಮಯೋಗಯುಕ್ತನಾಗಿ |
| ಸಮಾಚರನ್ | ವಿಹಿತ ಕರ್ಮಗಳನ್ನು ಚೆನ್ನಾಗಿ ಆಚರಿಸುತ್ತಾ |
| ಸರ್ವಕರ್ಮಾಣಿ | ಸರ್ವಶಾಸ್ತ್ರೀಯ ಕರ್ಮಗಳನ್ನೂ |
| ಜೋಷಯೇತ್ | (ಇತರರೂ) ಪ್ರೀತಿಯಿಂದ ಆಚರಿಸುವಂತೆ ಮಾಡಬೇಕು । |

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥**

| | |
|---|---|
| ಪ್ರಕೃತೇಃ ಗುಣೈಃ | ದೇಹರೂಪದಲ್ಲಿರುವ ಪ್ರಕೃತಿಯ ತ್ರಿಗುಣಗಳಿಂದ |
| ಸರ್ವಶಃ ಕ್ರಿಯಮಾಣಾನಿ, | ತಮ್ಮ ತಮ್ಮದೇ ಆದ ರೀತಿಯಲ್ಲಿ ಮಾಡಲ್ಪಡುತ್ತಲೇ (ಎಂದರೆ |

ಕರ್ಮಾಣಿ (ಪ್ರತಿ), — ಮಾಡಿಸಲ್ಪಡುತ್ತಲೇ) ಇರುವ, ಕರ್ಮಗಳ ಬಗ್ಗೆ,

ಅಹಂಕಾರ ವಿಮೂಢಾತ್ಮಾ — ದೇಹಾಭಿಮಾನದಿಂದ ಮುಚ್ಚಲ್ಪಟ್ಟ ನಿಜ ಸ್ವರೂಪವುಳ್ಳವನು (ಎಂದರೆ ಪ್ರಾರಂಭಿಕ ಕಮುಮುಕ್ಷುವು),

ಅಹಂ ಕರ್ತಾ ಇತಿಮನ್ಯತೇ — ನಾನೇ ಕರ್ಮಾಚರಣ ಮಾಡುತ್ತಿರುವವನು ಎಂದು ಭಾವಿಸಿರುತ್ತಾನೆ ॥ (ಇದು ತತ್ತ್ವ ಜ್ಞಾನವಲ್ಲ, ಅಜ್ಞಾನ)

(ಶಾಸ್ತ್ರೀಯ ಕರ್ಮವನ್ನೋ ಶದನುಗುಣ ಲೌಕಿಕ ಕರ್ಮಗಳನ್ನೋ ಮಾಡುತ್ತಿದ್ದರೂ 'ಅಹಂಕರ್ತಾ' ಎಂಬ ಭಾವ ಬರಬಾರದು ಇದು ಹೇಗೆ ಸಾಧ್ಯ ಎಂದರೆ ೩೦ನೇ ಶ್ಲೋಕದಲ್ಲಿ ಈ ರಹಸ್ಯವಡಗಿದೆ)

**ತತ್ತ್ವವಿತ್ತು ಮಹಾಬಾಹೋ, ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತೇ ಇತಿಮತ್ವಾ ನ ಸಜ್ಜತೇ ॥ ೨೮ ॥**

ಗುಣಕರ್ಮ-ವಿಭಾಗಯೋಃ — ತ್ರಿಗುಣಗಳ ವಿಭಾಗ, ಅವುಗಳಿಂದ ನಡೆಯುವ ಕರ್ಮಗಳ

ತತ್ತ್ವವಿತ್ತು, — ವಿಭಾಗ, ಇವೆರಡರ ತತ್ತ್ವಜ್ಞಾನವುಳ್ಳವನಾದರೋ,

ಗುಣಾಃ ಗುಣೇಷು — ಸತ್ತ್ವಾದಿಗುಣಗಳು ತಮ್ಮ ತಮ್ಮ ಪ್ರಭಾವಾನುಗುಣಕರ್ಮಗಳಲ್ಲಿ

ವರ್ತನ್ತೇ ಇತಿಮತ್ವಾ — ತೊಡಗುತ್ತವೆ ಎಂಬುದಾಗಿ ತಿಳಿದು (ಅರಿತು)

ನಸಜ್ಜತೇ — ('ಅಹಂ ಕರ್ತಾ' ಎಂಬ ಭಾವದಲ್ಲಿ) ಸಿಕ್ಕಿಕೊಳ್ಳುವುದಿಲ್ಲ

(ಇದು ತತ್ತ್ವ ಜ್ಞಾನದ ಒಂದು ಮಟ್ಟ)

**ಪ್ರಕೃತೇರ್ ಗುಣಸಂಮೂಢಾಃ ಸಜ್ಜನ್ತೇ ಗುಣ ಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥೨೯॥**

| | |
|---|---|
| ಅಕೃತ್ಸ್ನವಿದಃ | ಅಸಮಗ್ರ ಜ್ಞಾನವುಳ್ಳ ಮುಮುಕ್ಷುಗಳು |
| ಪ್ರಕೃತೇಃ | ದೇಹರೂಪ ಪ್ರಕೃತಿಯ ಕಾರಣದಿಂದಾಗಿ |
| ಗುಣಸಂಮೂಢಾಃ | ತ್ರಿಗುಣಗಳಿಂದಾಗುವ ಸಂಮೋಹಕ್ಕೆ ಒಳಪಟ್ಟು |
| ಗುಣಕರ್ಮಸು ಸಜ್ಜನ್ತೇ । | ತ್ರಿಗುಣಕೃತ ಕರ್ಮಗಳಲ್ಲಿ ಮಗ್ನರಾಗಿ ಬಿಡುತ್ತಾರೆ । (ಆತ್ಮ ಮರೆಯುತ್ತಾರೆ ಎಂದರ್ಥ) (ಆತ್ಮಜ್ಞಾನದ ಹಿನ್ನೆಲೆಯಿಲ್ಲದಿದ್ದರೆ ಕರ್ಮಯೋಗವಾಗುವುದಿಲ್ಲ ಅದು)। |
| ತಾನ್ ಮನ್ದಾನ್ | ಆ ಅಶಕ್ತರನ್ನು |
| ಕೃತ್ಸ್ನವಿತ್ | ಆತ್ಮದ ಸಮಗ್ರ ಜ್ಞಾನವುಳ್ಳವನು |
| ನ ವಿಚಾಲಯೇತ್ | ಕರ್ಮಮಾರ್ಗದಿಂದ ವಿಚಲಿತರನ್ನಾಗಿ ಮಾಡಬಾರದು |

(ಕರ್ಮ ಬಿಟ್ಟು ಆತ್ಮಧ್ಯಾನದಲ್ಲಿ ಕುಳಿತುಕೊಳ್ಳುವಂತೆ ಮಾಡಬಾರದು)
(ಏಕೆಂದರೆ ಅಜಿತೇನ್ದ್ರಿಯರಿಗೆ ಅದು ಅಪಾಯಕರ)

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥೩೦॥**

| | |
|---|---|
| ಅಧ್ಯಾತ್ಮ ಚೇತಸಾ, | ಆತ್ಮಸ್ವರೂಪದ ಬಗ್ಗೆ (ವೇದ ಶಾಸ್ತ್ರ ಪ್ರಸಿದ್ಧವಾದ ತತ್ತ್ವಜ್ಞಾನಾನುಗುಣ) ಸರಿಯಾದ ಬುದ್ಧಿಯಿಂದ (ಆತ್ಮಕ್ಕೆ ಆತ್ಮನಾಗಿದ್ದು ಎಲ್ಲ ಮಾಡಿಸುವವನು ನಾನು ಎಂದು ಸರಿಯಾಗಿ ತಿಳಿದು), |
| ಸರ್ವಕರ್ಮಾಣಿ, | ಎಲ್ಲ ಶಾಸ್ತ್ರೀಯ ಹಾಗೂ ಲೌಕಿಕ ಕರ್ಮಗಳನ್ನೂ, |
| ಮಯಿ ಸಂನ್ಯಸ್ಯ | ಸರ್ವಾನ್ತರಾತ್ಮನಾದ ನನ್ನಲ್ಲಿ ಸಂಪೂರ್ಣ ಒಪ್ಪಿಸಿ |
| (ಅದರಿಂದಾಗಿ) ನಿರಾಶೀಃ ಭೂತ್ವಾ | ಫಲದಾಸೆಗೆ ಯಾವ ಹಕ್ಕೂ ಇಲ್ಲದಂತಾಗಿ ('ಮಾಫಲೇಷು ಕದಾಚನ'') |
| ನಿರ್ಮಮ : | (ತಾನೂ ಶರೀರವೂ ಶ್ರೀ ಭಗವಂತನ ಸ್ವಾಧೀನವಾದ ಸ್ವತ್ತಾದ್ದರಿಂದಲೇ) ಕರ್ಮ-ಅದರ ಸಲಕರಣೆ-ಧನ ಇತ್ಯಾದಿ ಯಾವುದರಲ್ಲೂ ತನ್ನದು ಎಂಬ ಭ್ರಮೆ ಇಲ್ಲ |
| ಭೂತ್ವಾ | ದವನಾಗಿ ('ಮಾಕರ್ಮ ಫಲ ಹೇತುರ್ ಭೂಃ'') |
| ವಿಗತ-ಜ್ವರಃ | ಸಂಗತ್ರಯದ ಜ್ವರದಿಂದಲೂ ಕರ್ಮ ಮುಗಿದು ಸಂಸಿದ್ಧಿ ಯಾವ ಕಾಲಕ್ಕೆ ಎಂಬ ಚಿಂತೆಯ ಜ್ವರದಿಂದಲೂ, ರಹಿತನಾಗಿ |

| | |
|---|---|
| ಯುಧ್ಯಸ್ವ | ಯುದ್ಧಾದಿ ವಿಹಿತ ಕರ್ಮವನ್ನೇ ಶ್ರೀಭಗದದಾಜ್ಞಾ ಕೈಂಕರ್ಯರೂಪ ಆರಾಧನೆ ಎಂಬ ಪ್ರೀತಿಯಿಂದ ಮಾಡುತ್ತಾ ಬಾಳು ॥೩೦॥ |

(ಇಲ್ಲಿ ಹೇಳಲೇಬೇಕಾದ ವೇದಶಾಸ್ತ್ರ ಪ್ರಮಾಣಗಳನ್ನು ವಿಸ್ತೃತ ವ್ಯಾಖ್ಯಾನದಲ್ಲಿ ಕಾಣಬಹುದು)

**ಯೇ ಮೇಮತಮಿದಂ ನಿತ್ಯಮ್ ಅನುತಿಷ್ಠನ್ತಿ ಮಾನವಾಃ।**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿಕರ್ಮಭಿಃ ॥೩೧॥**

| | |
|---|---|
| (೧) ಯೇ ಮಾನವಾಃ | ಯಾವ ಮಾನವರು (ಎಂದರೆ ಪ್ರಾಣಿ-ಮರ-ಕಲ್ಲುಗಳಂತೆ ಆತ್ಮೋದ್ಧಾರಕ್ಕಾಗಿ ಶಾಸ್ತ್ರೋಕ್ತ ಜೀವನ ನಡೆಸಲು ಅಯೋಗ್ಯರಲ್ಲದ ಜೀವಿಗಳು) |
| ಮೇಮತಮ್ ಇದಮ್ | ಉಪನಿಷತ್ ಪ್ರತಿಪಾದ್ಯಪರಬ್ರಹ್ಮ ಪುರುಷೋತ್ತಮನಾದ ನನ್ನ |
| (ಇತಿ) | ನಿರ್ಣಯವಿದು ಎಂಬುದಾಗಿ (ಉಪನಿಷತ್ತುಗಳೇ ಎದ್ದು ಬಂದು ಶ್ರೀಕೃಷ್ಣನಾಗಿ ಕಾಣಿಸಿಕೊಂಡು ತಮ್ಮಲ್ಲಡಗಿರುವ ರಹಸ್ಯವನ್ನು ಹೀಗೆ ಹೇಳುತ್ತಿವೆ ಎಂಬಂತಿರುವ, ಸ್ವಯಂ ಪದ್ಮನಾಭನ ಮುಖ ಪದ್ಮದಿಂದ ಅಭಿವ್ಯಕ್ತವಾದ ನಿರ್ಣಯವಿದು, ಎಂಬುದಾಗಿ ಭಾವಪೂರ್ಣರಾಗಿ) |

| | |
|---|---|
| ನಿತ್ಯಮನುತಿಷ್ಠನ್ತಿ | ಸದಾ ಕಾಲವೂ ಜೀವನದ ಪ್ರತಿ ಹೆಜ್ಜೆಯಲ್ಲಿ ಅನುಸಂಧಾನ ಮಾಡುತ್ತಾ ಅನುಷ್ಠಾನ ಮಾಡುತ್ತಾರೋ । |
| (೨) ಶ್ರದ್ಧಾವನ್ತಃ | (ಮತ್ತೆ ಕೆಲವರು ಯಾರು ಅನುಷ್ಠಾನಕ್ಕೆ ಇದನ್ನು ತರದಿದ್ದರೂ) ಈ ಶಾಸ್ತ್ರಾರ್ಥ ರಹಸ್ಯದಲ್ಲಿ ಪೂರ್ಣ ಶ್ರದ್ಧಾಗೌರವ ಶ್ಲಾಘನೆ ಉಳ್ಳವರಾಗಿರುತ್ತಾರೋ । |
| (೩) (ಅಥವಾ) ಅನಸೂಯನ್ತಃ | (ಶ್ರದ್ಧೆಯಿಲ್ಲದಿದ್ದರೂ ಉತ್ತಮವಾದ ಈ ಶಾಸ್ತ್ರಾರ್ಥದಲ್ಲಿ) ದೋಷ ಬುದ್ಧಿತಳೆಯದೆ ಇರುತ್ತಾರೋ |
| ತೇ ಅಪಿ | ಅವರೆಲ್ಲರೂ ಕೂಡ |
| ಕರ್ಮಭಿರ್ ಮುಚ್ಯನ್ತೇ | (ಇಂತಹ ಪರಮ ಪವಿತ್ರ ಕರ್ಮಾಚರಣೆಯಿಂದ ಪ್ರೀತನಾದ ನನ್ನಿಂದಾಗಿ) ಪ್ರಾಚೀನ ಕರ್ಮಗಳ ದೆಸೆಯಿಂದ ಮುಕ್ತರಾಗುತ್ತಾರೆ (ಅಮೃತತ್ವಕ್ಕೆ ಬಹಳ ಹತ್ತಿರವಾಗುತ್ತಾರೆ ಎಂದು ಭಾವ) |

((೧) ಶೀಘ್ರ - (೨) ವಿಳಂಬಿತ - (೩) ವಿಳಂಬಿತತರವಾಗಿ ಎಂದು ಭಾವ)

**ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥೩೨॥**

| | |
|---|---|
| ಯೇ ತು ಮೇ ಮತಮ್ ಏತತ್ | ಯಾವ ಇತರರು ಈ ನನ್ನ ನಿರ್ಣಯವನ್ನು |

| | |
|---|---|
| ನ ಅನುತಿಷ್ಠನ್ತಿ | ಯಥಾವತ್ತಾಗಿ ಆಚರಣೆಗೆ ತರುವುದಿಲ್ಲವೋ |
| (ಯೇಚ) ಅಭ್ಯಸೂಯನ್ತಃ | ಯಾವ ಕೆಲವರು ಅದನ್ನು ದೋಷ ದೃಷ್ಟಿಯಿಂದ ಕಾಣುತ್ತಾರೋ, ಅವರುಗಳನ್ನು |
| ತಾನ್ ಸರ್ವ ಜ್ಞಾನವಿಮೂಢಾನ್ | ಎಲ್ಲ ರೀತಿಯ ಲೌಕಿಕ ಹಾಗೂ ಶಾಸ್ತ್ರೀಯ ತಿಳುವಳಿಕೆ ಇದ್ದರೂ ವಿಶೇಷ ಮೂಢರೆಂದೂ (ಆದ್ದರಿಂದಲೇ) |
| ನಷ್ಟಾನ್ | ಸಂಸಾರ ಪತಿತರೆಂದೂ (ಆದ್ದರಿಂದಲೇ) |
| ಅಚೇತಸಃ | ತಮ್ಮನ್ನು ತಾವೇ ವಂಚಿಸಿಕೊಂಡು ಕೆಡುವ ತಿಳಿಗೇಡಿಗಳೆಂದೂ |
| ವಿದ್ಧಿ | ತಿಳಿ |

(ಅತೀ ವಿಳಂಬವಾಗಿಯಾದರೂ ಸರಿ ಅನುಷ್ಠಾನ ಮಾಡಲೇಬೇಕು ಶ್ರೀ ಭಗವನ್ಮತವನ್ನು ಎಂದು ಭಾವ)

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ ಜ್ಞಾನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥**

| | |
|---|---|
| ಜ್ಞಾನವಾನಪಿ | (ಅಸೂಯಾಳು-ಅಶ್ರದ್ಧಾಳು-ಅನುಷ್ಠಾನವಿಹೀನ-ಇವರುಗಳಿರಲಿ) ಜ್ಞಾನನಿಷ್ಠನೂ ಕೂಡ |
| ಸ್ವಸ್ಯಾಃ ಪ್ರಕೃತೇಃ ಸದೃಶಂ ಚೇಷ್ಟತೇ । | ತನ್ನ ಪ್ರಾಚೀನ ಪ್ರಕೃತಿವಾಸನೆಗೆ ಅನುಗುಣವಾಗಿ ವರ್ತಿಸುತ್ತಾನೆ (ಏಕೆಂದರೆ-) |

| | |
|---|---|
| ಭೂತಾನಿ ಪ್ರಕೃತಿಂ ಯಾನ್ತಿ | ಪ್ರಾಕೃತ ಜೀವಿಗಳು ಪ್ರಕೃತಿವಾಸನೆಯನ್ನೇ ಅನುಸರಿಸುತ್ತವೆ. (ನಾಯಿ ನಾಯಿಹಿಂದೆಯೇ ಹೋಗುತ್ತದೆ. ನಾಯಿ ಜೊತೆಯೇ ಕಚ್ಚಾಡುತ್ತದೆ) |
| ನಿಗ್ರಹಃ ಕಿಂ ಕರಿಷ್ಯತಿ ? | (ನೆನ್ನೆಮೊನ್ನೆಪ್ರಾರಂಭವಾದ) ಇಂದ್ರಿಯನಿಗ್ರಹವು (ಅನಾದಿ ಪ್ರಕೃತಿ ಸಂಬಂಧ ಪ್ರಯುಕ್ತ ವಾಸನೆಯ ಎದುರಿಗೆ) ಏನು ತಾನೇ ಮಾಡ ಬಲ್ಲದು ? |

(ಇಲ್ಲಿಂದ ಪ್ರಾರಂಭಿಸಿ ಜ್ಞಾನ್ಯನಿಷ್ಠೆಯು (ಎಂದರೆ ವಿಹಿತಕರ್ಮ ಬಿಟ್ಟು ಆತ್ಮಧ್ಯಾನದಲ್ಲೇ ಮುಳುಗುವ ಪ್ರಯತ್ನದ ಮಾರ್ಗವು) ಬಹಳ ಉಪದ್ರವ ಮತ್ತು ಅಪಾಯಗಳಿಂದ ಕೂಡಿದೆ ಎಂದು ವಿಶದೀಕರಿಸಲಾಗಿದೆ - ಅಧ್ಯಾಯದ ಉಪಾಂತ್ಯದ ವರೆಗೂ)

**ಇನ್ದ್ರಿಯಸ್ಯೇನ್ದ್ರಿಯ ಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ।**
**ತಯೋರ್ನವಶಮಾಗಚ್ಛೇತ್ತೌಹ್ಯಸ್ಯ ಪರಿಪನ್ಥಿನೌ ॥೩೪॥**

| | |
|---|---|
| ಇನ್ದ್ರಿಯಸ್ಯ ಇನ್ದ್ರಿಯಸ್ಯ ಅರ್ಥೇ, | ಜ್ಞಾನೇಂದ್ರಿಯ ಹಾಗೂ ಕರ್ಮೇನ್ದ್ರಿಯ ಪ್ರತಿಯೊಂದರ ವಿಷಯ ಕ್ಷೇತ್ರದಲ್ಲಿ, |
| ರಾಗ-ದ್ವೇಷೌ ವ್ಯವಸ್ಥಿತೌ | 'ರಾಗ' 'ದ್ವೇಷ' - ಎರಡೂ (ಹುಲಿಗಳು) ಸ್ಥಿರವಾಗಿ ಕಾದುಕುಳಿತಿವೆ । |

| | |
|---|---|
| ತಯೋಃ ನ ವಶಮ್ ಆಗಚ್ಛೇತ್ । | ಅವೆರಡರ ಹಿಡಿತಕ್ಕೆ ಸಿಕ್ಕಿಕೊಳ್ಳಬಾರದು । |
| ತೌ ಹಿ ಅಸ್ಯ ಪರಿಪಂಥಿನೌ । | ಅವೆರಡಾದರೋ ಇವನಿಗೆ (ಭಯಂಕರ) ದುರ್ಜಯ ಶತ್ರುಗಳು ॥೩೪॥ |

(ಇವನಿಗೆ = ಕರ್ಮಯೋಗ ಬಲವಿಲ್ಲದವನಿಗೆ ಎಂದರ್ಥ)

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥**

| | |
|---|---|
| ಸ್ವನುಷ್ಠಿತಾತ್ ಪರಧರ್ಮಾತ್, | (ಸ್ವಲ್ಪ ಕಾಲ) ಚೆನ್ನಾಗಿ ಅನುಷ್ಠಿಸಲ್ಪಡುವ ಪರಧರ್ಮ ಎಂದರೆ ಜ್ಞಾನಯೋಗಕ್ಕಿಂತ, |
| ಸ್ವಧರ್ಮಃ, ವಿಗುಣಃ ಅಪಿ, | ಸಹಜ ಸುಲಭ ಧರ್ಮವಾದ ಕರ್ಮ ಯೋಗವು, ಸರ್ವಾಙ್ಗ ಸಂಪೂರ್ಣವಲ್ಲದೆ ಆಚರಿಸಲ್ಪಟ್ಟರೂ ಕೂಡ, |
| ಶ್ರೇಯಾನ್ | ಶ್ರೇಯಸ್ಕರ (ಅಪಾಯರಹಿತ)। |
| ಸ್ವಧರ್ಮೇ ನಿಧನಂ ಶ್ರೇಯಃ | ಕರ್ಮಯೋಗಾಚರಣೆಯಲ್ಲಿರುವಾಗಲೇ ಮರಣ ಬಂದರೂ ಸರಿಯೇ (ನೇಹ ಅಭಿಕ್ರಮ ನಾಶೋಽಸ್ತಿ ಎಂಬುದಾಗಿ ಮುಂದಿನ ಜನ್ಮದಲ್ಲಿ ಇನ್ನೂ ಚೆನ್ನಾಗಿ ಮುಂದುವರಿಯುತ್ತದೆ) । ಶ್ರೇಯಸ್ಸು ಖಂಡಿತ |
| ಪರಧರ್ಮೋ ಭಯಾವಹಃ | ಜ್ಞಾನಯೋಗವು ಪತನಭಯವನ್ನು ತರುವಂತಹುದು. |

(ಪ್ರಕೃತಿ ಸಂಬಂಧದಿಂದ ಬಹಿರ್ಮುಖಚಿತ್ತ ವೃತ್ತಿಯನ್ನು ಬಿಡಲಾರದವರಿಗೆ ಸಹಜ ಸುಲಭವಾದ್ದು ಬಾಹ್ಯ

ಕರ್ಮಗಳ ಮಾರ್ಗ। ಆದ್ದರಿಂದ ಕರ್ಮಯೋಗ ಸ್ವಧರ್ಮ ॥ ಅಂತರ್ಮುಖಿ ಪ್ರವೃತ್ತಿ ಅಸಹಜ→ಕಪಟಾಚಾರಕ್ಕೂ, ಅಕರಣೇ ಪ್ರತ್ಯವಾಯಕ್ಕೂ, ಬುದ್ಧಿನಾಶಾತ್ ಪ್ರಣಶ್ಯತಿ ಎಂಬಂತೆ ಪತನಕ್ಕೂ ಅವಕಾಶ ಹೆಚ್ಚುವ ಜ್ಞಾನಯೋಗದಲ್ಲಿ - ಅಪಾಯ ಭಯವಿದೆ। ಆದ್ದರಿಂದ ಅದು ಪರ ಧರ್ಮ॥)

**ಅರ್ಜುನ ಉವಾಚ**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥**

| | |
|---|---|
| ಅಥ ವಾರ್ಷ್ಣೇಯ ! | ಇಲ್ಲೊಂದು ಪ್ರಶ್ನೆ ವೃಷ್ಣಿವಂಶಪ್ರದೀಪನೇ ! |
| ಅಯಮ್ ಪುರುಷಃ | 'ಜ್ಞಾನವಾನ್' ಎಂದೀಗ ತಾನೇ ನಿರ್ದೇಶಿಲ್ಪಟ್ಟ ಸಾಧಕನು |
| ಅನಿಚ್ಛನ್ ಅಪಿ, | (ಆತ್ಮಜ್ಞಾನಾಸಕ್ತನಾಗಿದ್ದು) ಅಕಾರ್ಯವನ್ನಿಷ್ಟ ಪಡದಿದ್ದರೂ ಕೂಡ, |
| ಕೇನ ಪ್ರಯುಕ್ತಃ | ಯಾರಿಂದ ಪ್ರೇರಿತನಾಗಿ |
| ಪಾಪಂ ಚರತಿ | ಅಕಾರ್ಯ ಮಾಡಿ ಬಿಡುತ್ತಾನೆ ? (ಅದೂ ಹೇಗೆ?) |
| ಬಲಾತ್ ನಿಯೋಜಿತ ಇವ | ಬಲಾತ್ಕಾರದಿಂದ ದೂಡಲ್ಪಟ್ಟಂತೆ। |

(ಯಾರೋ ಬಲಪ್ರಯೋಗ ಮಾಡಿ ಕಳ್ಳತನ, ಸುಳ್ಳು ಸಾಕ್ಷಿ, ಮದ್ಯಪಾನ, ಇತ್ಯಾದಿ ಮಾಡಿಸಿದಂತೆ ! ಇದೇನಿದು ತನ್ನ ಉದ್ದೇಶಕ್ಕೆ ವಿರುದ್ಧವಾಗಿ ತಾನೇ ಕೆಲಸ ಮಾಡುವುದು, ಜ್ಞಾನವಿದ್ದರೂ?)

Funding: Tattva Heritage Foundation,Kolkata. Digitization: eGangotri.

ಶ್ರೀ ಭಗವಾನ್ ಉವಾಚ

**ಕಾಮಏಷ, ಕ್ರೋಧ ಏಷ, ರಜೋಗಣ ಸಮುದ್ ಭವಃ ।**
**ಮಹಾಶನೋ, ಮಹಾಪಾಪ್ಮಾ, ವಿದ್ಧ್ಯೇನಮಿಹ ವೈರಿಣಮ್ ॥೩೭॥**

ಕಾಮಃ ಏಷಃ, ಕ್ರೋಧಃ ಏಷಃ, ರಜೋಗುಣ ಸಮುದ್ ಭವಃ । (ರಜೋಗುಣದಿಂದ ಉದ್ ಭವಿಸಿದವನು) ಮಹಾಶನಃ । ಮಹಾಪಾಪ್ಮಾ । ಏನಂ, ಇಹ, ವೈರಿಣಮ್ ವಿದ್ಧಿ.

'ಕಾಮ' ಇವನು । 'ಕ್ರೋಧ' ಇವನು । (ಕ್ರೋಧ ಎನ್ನುವುದು 'ಕಾಮನದೇ ಮಾರು ವೇಷದ ಹೆಸರು) (ಗುಲಾಬಿಯಂತೆ ಕೆಂಪಾದಾಗ 'ಕಾಮ' 'ಕೆಂಡದಂತೆ ಕೆಂಪಾದಾಗ ಕ್ರೋಧ) ಸರ್ವ ಭಕ್ಷಕ। ಮಹಾಪಾಪಿ। ಇವನನ್ನು, ಈ ಪ್ರಕೃತಿ ಮಂಡಲದಲ್ಲಿ, ಸರ್ವರ ಶ್ರೇಯೋ ಹಾನಿಕಾರಕ ಮಹಾಶತ್ರು, ಎಂದು ತಿಳಿ ॥

**ಧೂಮೇನಾವ್ರಿಯತೇ ವಹ್ನಿಃ ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋಗರ್ಭಃ ತಥಾ ತೇನೇದಮಾವೃತಮ್ ॥೩೮॥**

ಧೂಮೇನ ವಹ್ನಿಃ ಯಥಾ ಆವ್ರಿಯತೇ, ಹೊಗೆಯಿಂದ ಬೆಂಕಿ ಹೇಗೆ ಆವರಿಸಲ್ಪಡಿತ್ತದೆಯೋ,
ಯಥಾ ಮಲೇನ ಆದರ್ಶಃ ಆವ್ರಿಯತೇ, ಹೇಗೆ ಕೊಳೆಯಿಂದ ಕನ್ನಡಿ ಆವರಿಸಲ್ಪಡುತ್ತದೋ,

| | |
|---|---|
| ಯಥಾ ಉಲ್ಬೇನ ಗರ್ಭಃ ಆವೃತಃ, ತಥಾತೇನ ಇದಮ್ ಆವೃತಮ್ | ಹೇಗೆ ಕಸದ ಚೀಲದಿಂದ ಗರ್ಭ ಆವೃತವಾಗಿರುತ್ತದೋ, ಹಾಗೆ ಈ ಕಾಮನಿಂದ ಈ ಜೀವಿ ಪ್ರಪಂಚವು ಆಕ್ರಮಿಸಲ್ಪಟ್ಟಿದೆ ॥೩೮॥ |

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನಚ ॥೩೯॥**

(ಜ್ಞಾನಿನಃ) ಚೇತನನ (ಜ್ಞಾನಂ) ಆತ್ಮ ಸ್ವರೂಪ ಜ್ಞಾನವು (ಏತೇನ ಕಾಮರೂಪೇಣ) ಈ ಕಾಮನೆಂಬ (ಅನಲೇನ) ಎಷ್ಟು ಕೊಟ್ಟರೂ ಸಾಕೆನ್ನದ ಮಹಾಭಕ್ಷಕನಾದ (ದುಷ್ಪೂರೇಣ) ಎಟುಕದ್ದನ್ನೂ ಕಬಳಿಸಹೋಗುವ ದುಸ್ಸಾಹಸಿಯಾದ (ನಿತ್ಯವೈರಿಣಾ) ಅನಾದಿಕಾಲದ ದೀರ್ಘ ಶತ್ರುವಿನಿಂದ (ಆವೃತಮ್) ಆವರಿಸಲ್ಪಟ್ಟಿದೆ ॥೩೯॥

**ಇಂದ್ರಿಯಾಣಿ ಮನೋಬುದ್ಧಿಃ ಅಸ್ಯಾಧಿಷ್ಠಾನ ಮುಚ್ಯತೇ ।**
**ಏತೈರ್ ವಿಮೋಹಯತ್ಯೇಷ ಜ್ಞಾನ ಮಾವೃತ್ಯದೇಹಿನಮ್ ॥೪೦॥**

ಇಂದ್ರಿಯಗಳು-ಮನಸ್ಸು ಬುದ್ಧಿ-ಇವು ಮೂರೂ (ಅಸ್ಯ) ಇವನಿಗೆ (ಅಧಿಷ್ಠಾನಮ್) ಸಲಕರಣೆಗಳೆಂಬುದಾಗಿ ಹೇಳಲ್ಪಟ್ಟಿವೆ । (ಏತೈಃ) ಇವುಗಳ ಸಹಾಯದಿಂದ (ಏಷಃ) ಈ ವೈರಿಯು (ದೇಹಿನಮ್) ದೇಹಧಾರಿಯನ್ನು (ಜ್ಞಾನಮಾವೃತ್ಯ ವಿಮೋಹಯತಿ) ಆತ್ಮಜ್ಞಾನ ಮರೆಸಿ ವಿಧವಿಧವಾಗಿ ಮೋಹಗೊಳಿಸುತ್ತಲೇ ಇರುತ್ತಾನೆ ॥೪೦॥

**ತಸ್ಮಾತ್ ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥**

| | |
|---|---|
| ತಸ್ಮಾತ್, ತ್ವಮ್, | ಆದ್ದರಿಂದ, ಪ್ರಕೃತಿಸಂಬಂಧದಿಂದ ಇನ್ದ್ರಿಯ ಕ್ರಿಯೆ ಬಿಡಲಾರದ ನೀನು, |
| ಆದೌ, ಇನ್ದ್ರಿಯಾಣಿ | ಮೋಕ್ಷಸಾಧನೆಯ ಆರಂಭದಲ್ಲೇ, ಜ್ಞಾನೇಂದ್ರಿಯಗಳನ್ನು ಕರ್ಮೇನ್ದ್ರಿಯಗಳಿಗೆ |
| ನಿಯಮ್ಯ | ಅನುಕೂಲವಾಗುವಂತೆಯೂ ಕರ್ಮೇನ್ದ್ರಿಯಗಳನ್ನು ಕರ್ಮಯೋಗದಲ್ಲಿ ತೊಡುಗುವಂತೆಯೂ ಮನಸಾ ನಿಯಮಿಸಿ (ಏಳನೇ ಶ್ಲೋಕ ನೋಡಿ), |
| ಜ್ಞಾನ-ವಿಜ್ಞಾನ-ನಾಶನಮ್ | (ಆತ್ಮಸ್ವರೂಪಜ್ಞಾನವನ್ನೂ ಆತ್ಮಅನಾತ್ಮ ವಿವೇಚನೆಯನ್ನೂ ನಾಶಮಾಡುವಂತಹ) |
| ಏನಂ ಪ್ರಜಹಿ ಭರತರ್ಷಭ ! | ಈ ವೈರಿಯನ್ನು ನಾಶಮಾಡು ಭರತವಂಶಪುಂಗವನೇ ! |

**ಇನ್ದ್ರಿಯಾಣಿ ಪರಾಣ್ಯಾಹುಃ ಇನ್ದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿಃ ಯೋ ಬುದ್ಧೇಃ ಪರತಸ್ತು ಸಃ ॥೪೨॥**

| | |
|---|---|
| ಇನ್ದ್ರಿಯಾಣಿ ಪರಾಣಿ ಆಹುಃ | ಇಂದ್ರಿಯಗಳು ಪ್ರಬಲ ಜ್ಞಾನವಿರೋಧಿಗಳೆಂದು ಹೇಳುತ್ತಾರೆ । |
| ಇನ್ದ್ರಿಯೇಭ್ಯಃ ಪರಂ ಮನಃ | ಇಂದ್ರಿಯಗಳಿಗಿಂತ ಮನಸ್ಸು ಇನ್ನೂ ಪ್ರಬಲ ವಿರೋಧಿ । |
| ಮನಸಃ ತು ಪರಾ ಬುದ್ಧಿಃ | ಮನಸ್ಸಿಗಿಂತಲೂ ಪ್ರಬಲ ವಿರೋಧಿ ಬುದ್ಧಿ । |
| ಯಃತು ಬುದ್ಧೇಃ ಪರತಃ,ಸಃ | ಯಾರು ಬುದ್ಧಿಗಿಂತಲೂ ಪ್ರಬಲ ವಿರೋಧಿ ಎಂದರೆ ಅವನೇ ! |

(ಇಂದ್ರಿಯ-ಮನೋ-ಬುದ್ಧಿಗಳಂತಹ ಪ್ರಬಲ ಜ್ಞಾನಶತ್ರುಗಳು ಯಾವಾತನ ಕೈಯಲ್ಲಿ ಚಮಚದಂತಿವೆಯೋ ಅವನೇ ಖಳನಾಯಕ-'ಕಾಮ'ನೆಂಬ ಜ್ಞಾನವೈರಿಮುಖಂಡ)
(ಆತ್ಮನಲ್ಲೇ ಇರುವ ಪ್ರಾಕೃತಾನುರಾಗವೇ (ಎಂದರೆ ರಸ/ರಾಗ/ರುಚಿಯೇ) ಆತ್ಮನಿಗೆ ಮಹಾಶತ್ರು ಎಂದು ಭಾವ । ಅಪ್ರಾಕೃತಾನುರಾಗವೇ ಎಂದರೆ ನಿತ್ಯವಸ್ತುರಾಗವೇ ಮಹಾಮಿತ್ರ)

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನ ಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥**

| | |
|---|---|
| ಏವಂ ಬುದ್ಧೇಃಪರಂ ಬುದ್ಧ್ವಾ, | ಹೀಗ ಬುದ್ಧಿಗಿಂತಲೂ ಸೂಕ್ಷ್ಮವೂಪ್ರಬಲವೂಆದ ವಿರೋಧಿಯನ್ನು ಅರಿತುಕೊಂಡು, |
| ಆತ್ಮಾನಂ, ಆತ್ಮನಾ, | ಮನಸ್ಸನ್ನು, (ಕರ್ಮಮಾರ್ಗವೇ ಭಗವದಾಜ್ಞೆ ಯೆಂಬ) ಬುದ್ಧಿಯಿಂದ |

ಸಂಸ್ತಭ್ಯ, ಕಾಮರೂಪಂ — ಕರ್ಮಯೋಗದಲ್ಲಿ ಸ್ಥಿರವಾಗಿ ನಿಲ್ಲಿಸಿ, ಕಾಮನೆಂಬ,

ದುರಾಸದಂ ಶತ್ರುಂ — (ತತ್ತ್ವ ಶಾಸ್ತ್ರ ಜ್ಞಾನಿಗೂ) ದುರ್ಜಯನಾಗಿರುವ, ಮಹಾಶತ್ರುವನ್ನು,

ಜಹಿ ಮಹಾಬಾಹೋ ! — ಸಂಹರಿಸು ! ಮಹಾಪರಾಕ್ರಮಿಯೇ ! (ಕರ್ಮಯೋಗ ಸಾಧಿಸಲು ಮಹಾ ಸಮರ್ಥನೇ !

(ದೇಹ ಸಾಮರ್ಥ್ಯಕ್ಕಿಂತ ಬುದ್ಧಿಸಾಮರ್ಥ್ಯ ಮನೋಬಲಗಳನ್ನು ಚೆನ್ನಾಗಿ ತೋರ್ಪಡಿಸು ಎಂದು ಭಾವ)

ಇತಿ ಶ್ರೀ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ

ಶ್ರೀ ಕೃಷ್ಣಾರ್ಜುನ ಸಂವಾದೇ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ॥



## ॥ ಅಥ ಚತುರ್ಥಾಧ್ಯಾಯಃ ॥ ೪೨ ಶ್ಲೋ ॥

### ಶ್ರೀ ಭಗವಾನುವಾಚ

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥

ಏವಂ ಪರಾಪ್ರಾಪ್ತಮ್ ಇಮಂ ರಾಜರ್ಷಯೋಽವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ॥೨॥

ಸ ಏವಾಯಂ ಮಯಾತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥೩॥

| | |
|---|---|
| ಇಮಮ್ ಅವ್ಯಯಂ ಯೋಗಂ | ಇಲ್ಲಿಯವರೆಗೆ ಹೇಳಿದ ಅಭಿಕ್ರಮನಾಶವಿಲ್ಲದ ಕರ್ಮಯೋಗವನ್ನು |
| ಅಹಂ ವಿವಸ್ವತೇ ಪ್ರೋಕ್ತವಾನ್ । | ನಾನು ಸೂರ್ಯನಿಗೆ ಹೇಳಿದೆನು (ಮನ್ವನ್ತರದಾದಿಯಲ್ಲಿ ।) |
| ವಿವಸ್ವಾನ್ ಮನವೇ ಪ್ರಾಹ । | ಸೂರ್ಯನು (ತನ್ನ ಮಗ) ವೈವಸ್ವತಮನುವಿಗೆ ಹೇಳಿದನು। |
| ಮನುಃ ಇಕ್ಷ್ವಾಕವೇ ಅಬ್ರವೀತ್ । | ಮನುವು (ತನ್ನ ಮಗ) ಇಕ್ಷ್ವಾಕುವಿಗೆ ಹೇಳಿದನು ।೧॥ |

| | |
|---|---|
| ಏವಂ ಪರಂಪರಾಪ್ರಾಪ್ತಮ್, | ಹೀಗೆ ಪಿತಾಪುತ್ರರೂಪಜ್ಞಾನಪರಂಪರೆಯಿಂದ ಪ್ರವಹಿಸಿ ಬಂದ, |
| ಇಮಂ, ರಾಜರ್ಷಯಃ ಅವಿದುಃ । | ಈ ಮೋಕ್ಷೋಪಾಯಾತ್ಮಕ ಜೀವನ ಕ್ರಮವನ್ನು, ಕೃತ ಯುಗಾದಿ ಕಾಲದ ರಾಜರ್ಷಿಗಳು |
| ಸಃ ಯೋಗಃ ಇಹ ಮಹತಾ ಕಾಲೇನ | ಅರಿತು ಅನುಷ್ಠಾನ ಮಾಡುತ್ತಿದ್ದರು । ಆ ಯೋಗ ಇಲ್ಲಿ ಸುದೀರ್ಘ ಕಾಲದಲ್ಲಿ |
| ನಷ್ಟಃ ಪರನ್ತಪ ! | ಹೋಗಿ ಬಿಟ್ಟಂತಾಗಿದೆ, ಪರಂತಪನೇ! ॥೨॥ |
| ಸಃಏವ ಪುರಾತನಃ ಯೋಗಃ ಅಯಂ | ಅದೇ ಮನ್ವಂತರಾದಿ ಕಾಲದ ಯೋಗವೇ ಆದ ಇದು |
| ಅದ್ಯತೇ ಮಯಾಪ್ರೋಕ್ತಃ | ಈಗ ನಿನಗೆ ನನ್ನಿಂದ ಲೋಪವಿಲ್ಲದೆ ಯಥಾವತ್ತಾಗಿ ಹೇಳಲ್ಪಟ್ಟಿದೆ। |
| ಮೇ ಭಕ್ತಃ ಅಸಿ ಸಖಾ ಚ | (ಕಾರಣವೇನೆಂದರೆ) (೧) ನನಗೆ ನೀನು ಪ್ರಪನ್ನನೂ ಆಗಿದ್ದೀಯೆ ಸಖನೂ |
| ಏತದ್ ಉತ್ತಮಂ ರಹಸ್ಯಮ್ | ಆಗಿದ್ದೀಯೆ (೨) ಇದು ಉತ್ತಮಸ್ತರದ ಉಪನಿಷದ್ರಹಸ್ಯವಾಗಿದೆ |
| ಇತಿ | ಎಂಬುದೇ ಕಾರಣ ॥೩॥ |

**ಅರ್ಜುನ ಉವಾಚ**

**ಅಪರಂ ಭವತೋಽಜನ್ಮ ಪರಂಜಜನ್ಮ ವಿವಸ್ವತಃ।**
**ಕಥಮೇತದ್ ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥**

| | |
|---|---|
| ಅಪರಂ ಭವತಃ ಜನ್ಮ | ಈಗ ನಮ್ಮ ಕಾಲದ್ದು ನಿನ್ನ ಜನ್ಮ । |
| ಪರಂ ಜನ್ಮ ವಿವಸ್ವತಃ | ಆಗ ಮನ್ವನ್ತರಾದಿಯದು ಜನ್ಮ ಸೂರ್ಯನದು । |
| ತ್ವಮ್ ಆದೌ ಪ್ರೋಕ್ತವಾನಿತಿ | ನೀನು ಮನ್ವನ್ತರಾದಿಯಲ್ಲಿ ಸೂರ್ಯನಿಗೆ ಹೇಳಿದೆ ಎಂದು |
| ಕಥಮ್ ಏತತ್ ವಿಜಾನೀಯಾಮ್ | ಹೇಗೆ ಇದನ್ನು ಯಥಾವತ್ತಾಗಿ ಅರಿಯಬಲ್ಲೆ ನಾನು ? |

**ಶ್ರೀಭಗವಾನುವಾಚ (ಅವತಾರ ರಹಸ್ಯಾರಂಭ)**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ!**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರನ್ತಪ! ॥೫॥**

ಅರ್ಜುನ! (ಮೇ) ನನಗೆ (ಬಹೂನಿಜನ್ಮಾನಿ ವ್ಯತೀತಾನಿ) ಅನೇಕಾನೇಕ ಜನ್ಮಗಳು ಆಗಿಹೋಗಿವೆ। (ತವ ಚ) ನಿನಗೂ ಅಷ್ಟೆ! (ತಾನಿ ಸರ್ವಾಣಿ ಅಹಂ ವೇದ) ಅವು ಎಲ್ಲವನ್ನೂ ನಾನು ಅರಿತಿದ್ದೇನೆ । (ನ ತ್ವಂ ವೇತ್ಥ ಪರನ್ತಪ!) ನೀನು ತಿಳಿದಿಲ್ಲ, ಶತ್ರು ಸಂಹಾರಕನೇ! ॥೫॥

**ಅಜೋऽಪಿ ಸನ್ ಅವ್ಯಯಾತ್ಮಾ ಭೂತಾನಾಮೀಶ್ವರೋऽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥**

ಅಜಃ ಅಪಿ ಸನ್, — ಜನ್ಮನಿರ್ಬಂಧವಿಲ್ಲದವನಾಗಿಯೂ ಇದ್ದುಕೊಂಡು,
ಭೂತಾನಾಮ್ ಈಶ್ವರಃ ಅಪಿಸನ್, — ಎಲ್ಲ ಜೀವಿಗಳ ಸೃಷ್ಟಿಸ್ಥಿತಿ ಸಂಹಾರ ಮೋಕ್ಷಾದಿ ನಿಯಾಮಕನೂ ಆಗಿದ್ದು ಕೊಂಡು,
ಅವ್ಯಯಾತ್ಮಾ ಅಪಿ ಸನ್, — ಸ್ವರೂಪ ಸ್ವಭಾವ ವಿಕಾರವಿಲ್ಲದವನಾಗಿಯೂ ಇದ್ದುಕೊಂಡು,
ಸ್ವಾಂ ಪ್ರಕೃತಿಮ್ ಅಧಿಷ್ಠಾಯ — ಸ್ವಸ್ವಭಾವಾನುಗುಣ ದಿವ್ಯಮಂಗಳ ಆಕಾರ ಧರಿಸಿ
ಆತ್ಮಮಾಯಯಾ, ಸಂಭವಾಮಿ — ಸ್ವಂತ ಇಚ್ಛೆಯಿಂದಲೇ, ಲೋಗರ ಸಜಾತೀಯನಾಗಿ ಕಾಣಿಸಿಕೊಳ್ಳುತ್ತೇನೆ ॥೬॥.

(ಲೋಕಜನರಂತೆ ಕಾಣಿಸಿಕೊಂಡಾಗಲೂ ಅಜತ್ವ. ಈಶ್ವರತ್ವ, ಅಮರತ್ವ, ಅವಿಕಾರಿತ್ವ, ದಿವ್ಯಮಂಗಳ ವಿಗ್ರಹ ಎಂದರೆ ಅಪ್ರಾಕೃತವಿಗ್ರಹ, ಸ್ವಾತಂತ್ರ್ಯ, ಎಲ್ಲವೂ ಕೊರತೆಯಿಲ್ಲದೆ ಹಾಗೇ ನನ್ನಲ್ಲಿ ಇರುತ್ತವೆ)(ಕರ್ಮಬಂಧ, ವಿಧಿ, ಮೃತಿ, ಮುಪ್ಪು, ಅಜ್ಞಾನ, ಪ್ರಕೃತಿಬಂಧ, ಇತ್ಯಾದಿ ಯಾವುದಕ್ಕೂ ಯಾವಾಗಲೂ ವಶ್ಯನಲ್ಲ)

**ಯದಾ ಯದಾ ಹಿ ದರ್ಮಸ್ಯ ಗ್ಲಾನಿರ್ ಭವತಿ ಭಾರತ ।**
**ಅಭ್ಯುತ್ಥಾನಮ್ ಅಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೭॥**

ಯದಾ ಯದಾ, ಧರ್ಮಸ್ಯ, — ಯಾವಯಾವಾಗ, ಶ್ರುತಿ ಸ್ಮೃತ್ಯುಕ್ತ ವಿಧಿಗಳಿಗೆ

ಗ್ಲಾನಿಃ ಭವತಿ, ಅಧರ್ಮಸ್ಯ ಅಭ್ಯುತ್ಥಾನಂ, ತದಾ ಆತ್ಮಾನಂ ಸೃಜಾಮಿ ಭಾರತ ||

ಬಹಳ ಕ್ಷಯ ಉಂಟಾಗುತ್ತದೆಯೋ, ನಿಷಿದ್ಧಾಚರಣೆಗೆ ತುಂಬ ಏಳಿಗೆಯೋ, ಆಗ ನನ್ನನ್ನು ನಾನೇ ಜನರ ಮಧ್ಯೆ ಕಾಣಿಸಿಕೊಳ್ಳುವಂತೆ ಮಾಡಿಕೊಳ್ಳುತ್ತೇನೆ, ಭರತಕುಲಮಣಿಯೇ!

(ಧರ್ಮದ ಹಾನಿ ಅಧರ್ಮದ ವೃದ್ಧಿ ಅವನಿಗೆ ಸಾಕೆನಿಸುವುದು ಯಾವಾಗ ಅವನೇ ನಿರ್ಣಯಿಸುತ್ತಾನೆ!)

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ, ಸಂಭವಾಮಿ ಯುಗೇ ಯುಗೇ ॥೮॥**

ಸಾಧೂನಾಂ ಪರಿತ್ರಾಣಾಯ, — ನನ್ನ ಅನನ್ಯ ಭಕ್ತರ ಪ್ರಾಣಧಾರಣೆ ಮಾಡಿಸುವುದಕ್ಕಾಗಿಯೂ

ದುಷ್ಕೃತಾಂ ವಿನಾಶಾಯ ಚ, — ಅವರ ವಿರೋಧಿಜನರ ನಿಗ್ರಹಕ್ಕಾಗಿಯೂ,

ಧರ್ಮ ಸಂಸ್ಥಾಪನಾರ್ಥಾಯ ಚ, — ಮದಾರಾಧನ ರೂಪ ವೈದಿಕ ಧರ್ಮದ ಸಮ್ಯಕ್ ಸ್ಥಾಪನೆಗಾಗಿಯೂ,

ಯುಗೇ ಯುಗೇ ಸಂಭವಾಮಿ — ಯುಗನಿಯಮವೂ ಇಲ್ಲದೆ ಆಗಾಗ ನನ್ನ ದಿವ್ಯಮಙ್ಗಳರೂಪವನ್ನು ಚೆನ್ನಾಗಿ ಕಾಣಿಸುತ್ತೇನೆ ॥೮॥

**ಜನ್ಮ ಕರ್ಮ ಚ ಮೇ ದಿವ್ಯಮ್ ಏವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ ಜನ್ಮ ನೈತಿ ಮಾಮೇತಿ ಸೋಽರ್ಜುನ ॥೯॥**

(ಮೇ ಜನ್ಮ ಕರ್ಮಚ) ನನ್ನ 'ಜನ್ಮ'ವನ್ನೂ 'ಕ್ರಿಯೆ'ಯನ್ನೂ (ಏವಂ ದಿವ್ಯಂ ಯಃ ತತ್ತ್ವತಃ ವೇತ್ತಿ) ಹೀಗೆ ದಿವ್ಯವಾಗಿರುವುದನ್ನು ಯಾರು ಯಥಾವತ್ತಾಗಿ ಅರಿತಿರುತ್ತಾನೋ (ದೇಹಂತ್ಯಕ್ತ್ವಾ ಸಃ ಪುನರ್ ಜನ್ಮ ನೈತಿ) ದೇಹ ತ್ಯಜಿಸಿದ ಮೇಲೆ ಅವನು ಪುನರ್ ಜನ್ಮ ಪಡೆಯುವುದಿಲ್ಲ ।
(ಮಾಮೇತಿ ಅರ್ಜುನ!) ನನ್ನನ್ನು ಸೇರಿ ಬಿಡುತ್ತಾನೆ ಅರ್ಜುನ ! ॥೯॥

**ವೀತರಾಗಭಯಕ್ರೋಧಾಃ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ ಭಾವ ಮಾಗತಾಃ ॥೧೦॥**

ಜ್ಞಾನ ತಪಸಾ ಪೂತಾಃ, — ಹೀಗಿರುವ ನನ್ನ ಅವತಾರ ರಹಸ್ಯ ಜ್ಞಾನವನ್ನೇ ತಪಸ್ಸಾಗಿ ಮಾಡಿಕೊಂಡು ಪವಿತ್ರರಾಗಿ, (ಆದ್ದರಿಂದಲೇ)
ವೀತ-ರಾಗ-ಭಯ-ಕ್ರೋಧಾಃ, — ರಾಗ (ವಿಷಯರುಚಿ)-ಭಯ-ಕೋಪಗಳಿಂದ ಮುಕ್ತರಾಗಿ,
ಮಾಮ್ ಉಪಾಶ್ರಿತಾಃ, — ನನ್ನನ್ನು ಸ್ವರೂಪದಾಸ್ಯಭಾವದಿಂದ ಆಶ್ರಯಿಸಿ,
ಮನ್ಮಯಾಃ, ಬಹವಃ, — ಹೃದಯದಲ್ಲಿ ನನ್ನ ಪ್ರೇಮ ಪ್ರವಾಹ ವುಳ್ಳವರಾಗಿ, ಅನೇಕಾನೇಕ 'ಸಾಧು'ಗಳು
ಮದ್ ಭಾವಮ್ ಆಗತಾಃ ॥ — ನನ್ನ ಸ್ವಭಾವವನ್ನು ಹೊಂದಿಬಿಟ್ಟಿದ್ದಾರೆ ॥

''ಅಪಹತಪಾಪ್ಮಾ ವಿಜರೋ ವಿಮೃತ್ಯುರ್ ವಿಶೋಕಃ ಅಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಙ್ಕಲ್ಪಃ''
ಎಂಬ ಈ ಗುಣಾಷ್ಟಕವೇ ಪರಮಾತ್ಮನಿಗೂ ನಿತ್ಯ-ಮುಕ್ತ-ರಿಗೂ ಇರುವ ಸ್ವಭಾವಸಾಮ್ಯ)

**ಯೇ ಯಥಾಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ! ಸರ್ವಶಃ ॥೧೧॥**

| | |
|---|---|
| ಯೇ | (ನನ್ನನ್ನು ಸಮ್ಯಕ್ ಆಶ್ರಯಿಸುವ ಅಪೇಕ್ಷಾಯುಕ್ತರಾದ) ಯಾರು |
| ಯಥಾ ಮಾಂ ಪ್ರಪದ್ಯನ್ತೇ | ಹೇಗೆ (ಭಾವಿಸಿ) ನನ್ನನ್ನು ಸಮಾಶ್ರಯಿಸುತ್ತಾರೋ |
| ತಾನ್ ತಥಾ ಏವ | ಅವರನ್ನು ಕುರಿತು, ಅವರಿಷ್ಟದ ಪ್ರಕಾರವೇ |
| ಭಜಾಮಿ | ನನ್ನನ್ನು ತೋರಿಸಿಕೊಳ್ಳುತ್ತೇನೆ । (ಹೆಚ್ಚೇಕೆ ? ) |
| ಮನುಷ್ಯಾಃ, ಮಮ | ಎಲ್ಲ ಮನುಷ್ಯರೂ (ಸ್ತ್ರೀ-ಬಾಲ-ವೃದ್ಧರೂ), ನನ್ನ |
| ವರ್ತ್ಮ, | ರೂಪ-ಆಲಾಪ-ಅವಲೋಕನ-ಚಲಿತ-ಚೇಷ್ಟಿತಾದಿ |
| ಸರ್ವಶಃ | ಗಳ ರೀತಿಗಳನ್ನು, ತಮ್ಮ ಚಕ್ಷುರಾದಿ ಷಡಿಂದ್ರಿಯಗಳಿಂದಲೂ ತಮಗಿಷ್ಟವಾದ ಎಲ್ಲ |
| ಅನು- | ರೀತಿಗಳಿಂದಲೂ, ಅನುಭವಿಸಿ ಅನುಸಂ- |
| ವರ್ತನ್ತೇ | ಧಾನ ಮಾಡಿ ವರ್ತಿಸುತ್ತಾರೆ (ಜೀವಿಸುತ್ತಾರೆ) ॥೧೧॥ |

(ಭಾವಾರ್ಥ : - 'ಮದ್‌ಭಾವ' ಹೊಂದುವ ಮೋಕ್ಷ ಮಾತ್ರವೇ ಅವತಾರಾನುಸಂಧಾನದ ಫಲವಲ್ಲ. ಇಹದಲ್ಲೂ ನನ್ನ ಅನುಭವವನ್ನು ಸರ್ವ ಆಸಕ್ತರಿಗೂ ಕೊಡುತ್ತೇನೆ । ಸ್ತ್ರೀ ಬಾಲರಾದಿಯಾಗಿ ನಂದ

ಗೋಕುಲದಲ್ಲಿ ಎಲ್ಲರನ್ನೂ ಸಂತೋಷಪಡಿಸಿದಂತೆ, ಎಲ್ಲ ಭಕ್ತರಿಗೂ ಇಹದಲ್ಲೇ ನನ್ನ ಅನುಭವವುಂಟು। ವಿಭವಾವತಾರದಲ್ಲಿ ಮಾತ್ರವಲ್ಲ; ಯಾವ ಭಕ್ತನಿಗೆ ನನ್ನ ಯಾವ ರೂಪ ಯಾವ ಭಂಗಿ ಇಷ್ಟವಾಗುತ್ತದೆಯೋ ನಾನು ಆತನಿಗೆ ಆ ರೂಪದಲ್ಲೇ ಆರಾಧ್ಯನಾಗಿ ಸಾಂನಿಧ್ಯ ಕೊಡುತ್ತಾ ಅನುಭಾವ್ಯನಾಗುತ್ತೇನೆ, ಎಂಬುದಾಗಿ ವಿಭವಾವತಾರಾನುರೂಪವಾಗಿ ಬರುವ ಅರ್ಚಾವತಾರವೂ ಇಲ್ಲಿ ಸೂಚಿತವಾಗಿದೆ.)

**ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ ಭವತಿ ಕರ್ಮಜಾ ॥೧೨॥**

| | |
|---|---|
| ಇಹ ಕರ್ಮಣಾಂ ಸಿದ್ಧಿಂ ಕಾಙ್ಕ್ಷನ್ತಃ | ಈ ಲೋಕದಲ್ಲಿ ಕರ್ಮಗಳ ಫಲ ಬಯಸುವವರು |
| ದೇವತಾಃ ಯಜನ್ತೇ। | ನಾನಾದೇವತೆಗಳನ್ನು (ಮಾತ್ರ) ಪೂಜಿಸುತ್ತಾರೆ । |
| | (ಅವರ ಅನ್ತರಾತ್ಮನಾದ ನನ್ನನ್ನಲ್ಲ!) । |
| ಹಿ, ಕ್ಷಿಪ್ರಂ, ಮಾನುಷೇಲೋಕೇ(ಏವ) | ಏಕೆಂದರೆ, ಶೀಘ್ರ, ಇದೇ ಲೋಕದಲ್ಲೇ, |
| ಕರ್ಮಜಾ ಸಿದ್ಧಿರ್ ಭವತಿ | ದೇವತಾಪೂಜೆಯಿಂದ ಇಷ್ಟಸಿದ್ಧಿ ಸಂಭವಿಸುತ್ತದೆ ॥ |

(ಮೋಕ್ಷೇತರ ಕ್ಷುದ್ರಫಲಗಳು ದೇವತಾ ಪೂಜೆವ್ರತಗಳಿಂದ ಇಲ್ಲೇ ಶೀಘ್ರ ಸಂಭವಿಸುತ್ತವೆ)
ಅನಾದಿ ಕಾಲಸಂಚಿತ ಪ್ರಾಚೀನ ಕರ್ಮರಾಶಿ ಕ್ಷೀಣಿಸದೆ ಇರುವ ಕಾರಣ ಹೀಗೆ
ಕ್ಷುದ್ರಫಲಾಕಾಂಕ್ಷಿಗಳಾಗಿ ಅನೇಕ ದೇವತಾ ಪೂಜೆಗಳಲ್ಲಿ ಆಸಕ್ತರಾಗುತ್ತಾರೆ! ಎಂದು ಭಾವ)

(ಮೋಕ್ಷವಿರೋಧಿ ಅಕರ್ಮರಾಶಿ ಕ್ಷಯಿಸುವ ದಾರಿ ಏನೆಂದರೆ)

**ಚಾತುರ್ ವರ್ಣ್ಯಮ್ ಮಯಾ ಸೃಷ್ಟಂ ಗುಣ-ಕರ್ಮ-ವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮ್+ ಅವ್ಯಯಮ್ ॥೧೩॥**

| | |
|---|---|
| ಚಾತುರ್ವರ್ಣ್ಯಂ, | ನಾಲ್ಕು ವರ್ಣಗಳೇ ಪ್ರಧಾನವಾಗಿರುವ ಈ ಇಡೀಜಗತ್ತು, |
| ಗುಣ-ಕರ್ಮ-ವಿಭಾಗಶಃ, | ಸತ್ತ್ವಾದಿಗುಣ ವಿಭಾಗದಿಂದಲೂ ಶಮಾದಿಕರ್ಮ ವಿಭಾಗ |
| ಮಯಾಸೃಷ್ಟಮ್ । | ದಿಂದಲೂ ಕೂಡಿದ್ದಾಗಿ, ನನ್ನಿಂದ ಸೃಷ್ಟಿಸಲ್ಪಟ್ಟಿತು। (ಸ್ಥಿತಿ-ಲಯಕಾರ್ಯಗಳುನನ್ನಿಂದಲೇ ಎಂದು ಅಧ್ಯಾಹೃತ)। |
| ತಸ್ಯ | ಆರೀತಿಯ ಚಿತ್ರ, ವಿಚಿತ್ರಸೃಷ್ಟ್ಯಾದಿ ಕರ್ಮಗಳಿಗೆ |
| ಕರ್ತಾರಮಪಿ ಅವ್ಯಯಂಮಾಂ | ಕರ್ತೃವಾಗಿದ್ದರೂ ಅವಿಚಲಿತ ಸ್ವಭಾವನಾದ ನನ್ನನ್ನು |
| ಅಕರ್ತಾರಂ ವಿದ್ಧಿ | ಅಕರ್ತನೆಂದು ತಿಳಿ. (ಅದು ಹೇಗೆಂದರೆ) |

**ನ ಮಾಂ ಕರ್ಮಾಣಿ ಲಿಮ್ಪನ್ತಿ, ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿ ಜಾನಾತಿ, ಕರ್ಮಭಿರ್ನ ಸ ಬದ್ಧ್ಯತೇ ॥೧೪॥**

| | |
|---|---|
| ಕರ್ಮಾಣಿ ನ ಮಾಂ ಲಿಮ್ಪನ್ತಿ | ಈ ವಿಚಿತ್ರಸೃಷ್ಟ್ಯಾದಿಕರ್ಮಗಳು ನನ್ನನ್ನು ಬಂಧಿಸುವುದಿಲ್ಲ। |
| ಮೇ ಕರ್ಮಫಲೇ ನಸ್ಪೃಹಾ । | (ಏಕೆಂದರೆ) ನನಗೆ ಕರ್ಮಫಲದಲ್ಲಿ ಆಸೆಯಿಲ್ಲ । |
| ಇತಿಮಾಂ ಯೋಽಭಿಜಾನಾತಿ, | ಎಂಬುದಾಗಿ ನನ್ನನ್ನು ಯಾರು ಸರಿಯಾಗಿ ಅರಿಯು |

| | |
|---|---|
| ಸ ಕರ್ಮಭಿಃನ ಬದ್‌ಧ್ಯತೇ । | ತ್ತಾನ್ಸೋ, ಅವನು ಪ್ರಾಚೀನ ಕರ್ಮಗಳಿಂದ ಬದ್ಧನಾಗುವುದಿಲ್ಲ |

(ಹೀಗೆ ಕರ್ಮಬಂಧ ಹೋದಾಗ ಕ್ಷುದ್ರ ಫಲಗಳ ಆಸೆ ಹೋಗಿ ಮಹಾಪುರುಷಾರ್ಥವಾದ ಮೋಕ್ಷದ ಆಸೆ ಉಂಟಾಗತೊಡಗುತ್ತದೆ - ಎಂದು ಭಾವ)

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ**
**ಕುರು ಕರ್ಮೈವ ತಸ್ಮಾತ್ತ್ವಮ್ ಪೂರ್ವೈಃ ಪೂರ್ವತರಂ ಕೃತಮ್ ॥೧೫॥**

| | |
|---|---|
| ಏವಂ ಜ್ಞಾತ್ವಾ | ಈ ರೀತಿ ನನ್ನನ್ನರಿತು ಕೊಂಡು (ಪಾಪವಿಮುಕ್ತರಾದಂತಹ) |
| ಪೂರ್ವೈಃ ಮುಮುಕ್ಷುಭಿಃ ಅಪಿ | ಹಿಂದಿನ ಕಾಲದ ಮೋಕ್ಷಾಕಾಂಕ್ಷಿಗಳಿಂದಲೂ ಕೂಡ |
| ಕರ್ಮ ಕೃತಮ್ | (ನನ್ನ ಆದರ್ಶವನ್ನೇ ಅನುಸಂಧಾನ ಮಾಡಿ) ಕರ್ಮಯೋಗವು ಆಚರಿಸಲಪ್ಪಿತು । |
| ತಸ್ಮಾತ್, ತ್ವಂ ಪೂರ್ವೈಃ | ಹೀಗೆ ಪೂರ್ವಜರ ಆದರ್ಶಗಳು ಇರುವುದರಿಂದ ನೀನು |
| ಕೃತಂ | ಹಿಂದಿನ ಹಿರಿಯರಿಂದ ಎಂದರೆ ವಿವಸ್ವಾನ್-ಮನು ಇಕ್ಷ್ವಾಕು ಮುಂತಾದ ಪೂರ್ವಜರಿಂದ ಮಾಡಲ್ಪಟ್ಟ |
| ಪೂರ್ವತರಂ ಕರ್ಮೈವ ಕುರು- | ಅವರಿಗಿಂತಲೂ ಪುರಾತನವಾಗಿದ್ದು ನನ್ನಿಂದ ಅವರಿಗೆ ಉಪದೇಶಿಲ್ಪಟ್ಟ ಕರ್ಮಯೋಗವನ್ನೇ ಮಾಡು ॥೧೫॥ |

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧೬॥**

| | |
|---|---|
| ಕರ್ಮ ಕಿಂ ? | ಮುಮುಕ್ಷೂಚಿತ ಕರ್ಮ ಯಾವುದು ? |
| ಅ ಕರ್ಮ ಕಿಂ ? | 'ಅಕರ್ಮ' ಎಂದರೇನು ? |
| ಇತಿ ಅತ್ರ, ಕವಯಃ ಅಪಿ | ಎಂಬೀವಿಷಯದಲ್ಲಿ ವಿದ್ವಾಂಸರೂ ಕೂಡ |
| ಮೋಹಿತಾಃ। | ಸರಿಯಾದ ಜ್ಞಾನವಿಲ್ಲದವರಾಗಿದ್ದಾರೆ। |
| ತತ್‌ಕರ್ಮ ತೇ ಪ್ರವಕ್ಷ್ಯಾಮಿ | ಅಂತಹ ಕರ್ಮವನ್ನು ನಿನಗೆ ಸ್ಪಷ್ಟೀಕರಿಸುತ್ತೇನೆ |
| ಯತ್ ಜ್ಞಾತ್ವಾ | ಯಾವ ಇದನ್ನು ತಿಳಿದು ಆಚರಿಸಿದ ಮೇಲೆ |
| ಅಶುಭಾತ್ ಮೋಕ್ಷ್ಯಸೇ | ಸಂಸಾರರೂಪಅಮಂಗಳದಿಂದ ಬಿಡುಗಡೆ ಹೊಂದುವೆ ।೧೬॥ |

**ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥೧೭॥**

| | |
|---|---|
| ಕರ್ಮಣಃ ಅಪಿ ಬೋದ್ಧವ್ಯಂ (ಅಸ್ತಿ) | ಕರ್ಮಸ್ವರೂಪದ ಬಗ್ಗೆಯೂ ತಿಳಿದುಕೊಳ್ಳಬೇಕಾದ ರಹಸ್ಯ |
| ವಿಕರ್ಮಣಃ ಚ ಬೋದ್ಧವ್ಯಮ್ (ಅಸ್ತಿ) | (ಇದೆ) ನಿತ್ಯ-ನೈಮಿತ್ತಿಕ-ಕಾಮ್ಯ-ಲೌಕಿಕ ಎಂದು ವಿವಿಧವಾ ವಾಗಿರುವ ಕರ್ಮದ ಬಗ್ಗೆಯೂ ತಿಳಿದುಕೊಳ್ಳತಕ್ಕ ರಹಸ್ಯವಿದೆ। |
| ಅಕರ್ಮಣಃ ಚ ಬೋದ್ಧವ್ಯಮ್ (ಅಸ್ತಿ) | ಕರ್ಮವಲ್ಲದ್ದುಎಂದರೆ ಜ್ಞಾನದಬಗ್ಗೆಯೂ ಬೋದ್ಧವ್ಯವಿದೆ। |

| | |
|---|---|
| ಕರ್ಮಣಃ ಗತಿಃ ಗಹನಾ | ಮುಮುಕ್ಷೋಚಿತ ಕರ್ಮದನಡೆಯು ದುರ್ಜ್ಞೇಯರಹಸ್ಯ ॥ |

(ಮೇಲೆ ಹೇಳಿದ ಮೂರೂ ಕರ್ಮಕ್ಕೆ ಸಂಬಂಧಿಸಿದ್ದು. ಕರ್ಮಕ್ಕೆ ಸಂಬಂಧಿಸಿದ ಈ ಮೂರರ ವಿಶದ ಜ್ಞಾನ ಅಶ್ರದ್ಧಾಳುಗಳಿಗೂ ಅಜಾಗರೂಕರಿಗೂ ಎಟುಕುವಂತಹುದಲ್ಲ - ಶಾಸ್ತ್ರದ ಸಾಮಾನ್ಯ ಜ್ಞಾನವುಳ್ಳ ಪಂಡಿತರಿಗೂ ಸಿಕ್ಕುವಂತಹುದಲ್ಲ ! )

**ಕರ್ಮಣ್ಯಕರ್ಮ ಯಃ ಪಶ್ಯೇದ ಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥೧೮॥**

(ಕರ್ಮವೆಲ್ಲ ಆತ್ಮಜ್ಞಾನಮಯವಾಗಬೇಕು)

| | |
|---|---|
| ಕರ್ಮಣಿ ಅಕರ್ಮ ಯಃ | ಕರ್ಮಾಚರಣೆಯಲ್ಲೇ ಆತ್ಮಯಾಥಾತ್ಮ್ಯಜ್ಞಾನವನ್ನು ಯಾವಾತನು |
| ಪಶ್ಯೇತ್, | ಅನುಸನ್ಧಾನರೂಪದಲ್ಲಿ ಅನುಭವಿಸುತ್ತಿರುತ್ತಾನೆಯೋ |
| ಅಕರ್ಮಣಿ ಚ ಯಃ (ಏವ) | ಆತ್ಮಜ್ಞಾನಾನುಸಂಧಾನ ನಡೆಯುತ್ತಿರುವಾಗಲೇ ಯಾವಾತನೇ |
| ಕರ್ಮ (ಪಶ್ಯೇತ್), | ಕರ್ಮಾನುಷ್ಠಾನವನ್ನೂ ಅನುಭವಿಸುತ್ತಿರುತ್ತಾನೋ, |
| ಸ ಬುದ್ಧಿಮಾನ್ | ಅವನು ಸಕಲಶಾಸ್ತ್ರ ಸಾರಾರ್ಥ ಬಲ್ಲವನು । |
| ಮನುಷ್ಯೇಷು (ಸಃ) ಯುಕ್ತಃ | ಮಾನವ ಜನ್ಮಿಗಳಲ್ಲಿ ಅವನು ಮೋಕ್ಷಾರ್ಹತಾಯುಕ್ತನು । |
| (ಸಃ ಏವ) ಕೃತ್ಸ್ನಕರ್ಮಕೃತ್ | ಅವನೇ ಸಮಗ್ರ, ಶಾಸ್ತ್ರೀಯ ಕರ್ಮಾನುಷ್ಠಾನ ಮಾಡುತ್ತಿರುವವನು । |

**ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಙ್ಕಲ್ಪವರ್ಜಿತಾಃ ।**
**ಜ್ಞಾನಾಗ್ನಿ ದಗ್ಧ ಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥೧೯॥**

| | |
|---|---|
| ಯಸ್ಯ ಸರ್ವೇ ಸಮಾರಮ್ಭಾಃ | ಯಾವಾತನ ದ್ರವ್ಯಾರ್ಜನಾದಿ ಲೌಕಿಕ ಕರ್ಮಪೂರ್ವಕ ನಿತ್ಯನೈಮಿತ್ತಿಕಾದಿ ಎಲ್ಲ ಕರ್ಮ ಪ್ರವೃತ್ತಿಗಳೂ |
| ಕಾಮ-ಸಂಕಲ್ಪ-ವರ್ಜಿತಾಃ | ಫಲಕಾಮನೆ- ದೇಹವೇ ತಾನೆಂಬ ಚೆನ್ನಾಗಿ ಬೇರೂರಿರುವ ಭ್ರಮೆ - ಇವೆರಡರಿಂದ ವರ್ಜಿತವಾಗಿವೆಯೋ |
| ತಂ ಪಣ್ಡಿತಂ, | ಆದೇಹಾತ್ಮ ವಿವೇಕವಂತನನ್ನು, |
| ಬುಧಾಃ, ಜ್ಞಾನಾಗ್ನಿ ದಗ್ಧ ಕರ್ಮಾಣಂ ಆಹುಃ | ಕರ್ಮ-ಜ್ಞಾನಗಳ ತತ್ತ್ವವರಿತವರು, ಕರ್ಮಾನ್ತರ್ಗತ ಆತ್ಮಜ್ಞಾನದಿಂದ ದಗ್ಧವಾದ ಪ್ರಾಚೀನವುಳ್ಳವನನ್ನಾಗಿ ಹೇಳುತ್ತಾರೆ ॥೧೯॥ |

**ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ**
**ಕರ್ಮಣ್ಯಭಿ ಪ್ರವೃತ್ತೋಽಪಿ ನೈವಕಿಂಚಿತ್ ಕರೋತಿಸಃ ॥೨೦॥**

| | |
|---|---|
| ಕರ್ಮಫಲಾಸಙ್ಗಂತ್ಯಕ್ತ್ವಾ, ನಿತ್ಯತೃಪ್ತಃ, | ಕರ್ಮಫಲಾಸಕ್ತಿ ತ್ಯಜಿಸಿ, ನಿತ್ಯನಾದಸ್ವಾತ್ಮನ ಸ್ವರೂಪ ವೈಭವದಲ್ಲೇ ಪರಮಸನ್ತುಷ್ಟನಾಗಿ, |

| | |
|---|---|
| ನಿರಾಶ್ರಯಃ, | 'ಅಸ್ಥಿರ ಪ್ರಕೃತಿಯು ತನ್ನ ಆಶ್ರಯ' ಎಂಬ ಭಾವನೆಯ ಪೊರೆಯಿಂದ ಹೊರಕ್ಕೆ ಬಂದವನಾಗಿ |
| ಕರ್ಮಣಿ ಅಭಿಪ್ರವೃತ್ತೋಽಪಿ, | ಕರ್ತವ್ಯಗಳಲ್ಲಿ ಆಭಿಮುಖ್ಯದಿಂದ (ಚೆನ್ನಾಗಿ ಗಮನವಿಟ್ಟು) |
| ನೈವ ಕಿಂಚಿತ್ ಕರೋತಿ ಸಃ | ಪ್ರವರ್ತಿಸಿದರೂ ಕೂಡ, ಏನನ್ನೂ ಅವನು ಮಾಡುತ್ತಿಲ್ಲ ! |

(ಕರ್ಮದ ನೆಪದಲ್ಲಿ ಜ್ಞಾನಾಭ್ಯಾಸವನ್ನೇ ಮಾಡುತ್ತಿದ್ದಾನೆ, ಕಣ್ಣು ಮುಚ್ಚಿ ಕೂರದೆಯೇ, ಎಂದು ಭಾವ ।೨೦।।)

**ನಿರಾಶೀರ್ ಯತ ಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮಕುರ್ವನ್ನಾಪ್ನೋತಿ ಕಿಲ್ಬಿಷಮ್ ।।೨೧।।**

| | |
|---|---|
| ನಿರಾಶೀಃ, ಯತ-ಚಿತ್ತಾತ್ಮಾ, | ಫಲಾದಾಶೆಯಿಲ್ಲದೆ, ಚಿನ್ತನಶೀಲ ಮನಸ್ಸನ್ನು ಆತ್ಮದಲ್ಲೇ ನಿಯಮಿಸಿ, |
| ತ್ಯಕ್ತ ಸರ್ವಪರಿಗ್ರಹಃ, | ಸರ್ವವಿಧವಸ್ತು ವ್ಯಕ್ತಿಗಳಲ್ಲಿ ಮಮತಾರಹಿತನಾಗಿ, |
| ಶಾರೀರಂ ಕೇವಲಂ, ಕರ್ಮ, | (ಜೀವಿತ ಕಾಲ ಪೂರ್ತಿ) ಕೇವಲ ಶರೀರಯಂತ್ರದಿಂದ, ವಿಹಿತ ಕರ್ಮಾದಿ |
| ಕುರ್ವನ್, ಕಿಲ್ಬಿಷಂ | ಆಚರಣೆ ಮಾಡುತ್ತಿದ್ದರೂ, ಸಂಸಾರ ರೂಪಕಶ್ಮಲವನ್ನು (ಪಾಪಫಲವನ್ನು ) |
| ನಾಪ್ನೋತಿ | ಅನುಭವಿಸುವುದಿಲ್ಲ । |

(ಜ್ಞಾನಯೋಗದ ಹಂಗಿಲ್ಲದೆ ಕರ್ಮಯೋಗದಿಂದಲೇ ಕಿಲ್ಬಿಷವನ್ನೆಲ್ಲ ದಾಟಿ ಆತ್ಮದರ್ಶನ ಪಡೆಯುತ್ತಾನೆ ಎನ್ನುವವರೆಗೂ ಈ ಶ್ಲೋಕದ ಅರ್ಥವ್ಯಾಪ್ತಿ)

**ಯದೃಚ್ಛಾಲಾಭಸನ್ತುಷ್ಟಃ ದ್ವನ್ದ್ವಾತೀತೋ ವಿಮತ್ಸರಃ।**
**ಸಮಃಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥೨೨॥**

(ಯದೃಚ್ಛಾಲಾಭಸನ್ತುಷ್ಟಃ) ತಾನಾಗಿ ಸಿಕ್ಕಿದ ಶರೀರ ಧಾರಕ ಪೋಷಕ ವಸ್ತುವಿನಿಂದ ತೃಪ್ತನಾಗಿ (ದ್ವನ್ದ್ವಾತೀತಃ) ಶೀತೋಷ್ಣಾದಿಸುಖದುಃಖಪ್ರದದ್ವನ್ದ್ವ ಸಹಿಷ್ಣುವಾಗಿ (ವಿಮತ್ಸರಃ) ಅನಿಷ್ಟ ಒದಗಿದಾಗ ಯಾರಮೇಲೂ ಕೋಪಿಸಿಕೊಳ್ಳದೆ (ಸಮಃಸಿದ್ಧೌ ಅಸಿದ್ಧೌಚ) ಜಯಾಪಜಯಗಳಲ್ಲಿ ಸಮಚಿತ್ತನಾಗಿ (ಕೃತ್ವಾಪಿ) ಶಾರೀರ ಕರ್ಮಮಾತ್ರ ಮಾಡಿದರೂ ಕೂಡ (ನನಿಬಧ್ಯತೇ) (ಜ್ಞಾನಯೋಗಾಪೇಕ್ಷೆಯಿಲ್ಲದೆಯೇ) ಸಂಸಾರಬಂಧ ವಿಮುಕ್ತನಾಗುತ್ತಾನೆ ॥

(ಆತ್ಮದ ಅನುಸಂಧಾನದಿಂದ ಕೂಡಿ ಪ್ರಾಕೃತವೆಲ್ಲದರಲ್ಲೂ ರಾಗ-ದ್ವೇಷಗಳನ್ನು ಬಿಟ್ಟಿರುವುದರಿಂದ ಕರ್ಮವು ಬಂಧಕವಾಗುವುದಿಲ್ಲ) ॥೨೨॥

**ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತ ಚೇತಸಃ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲಿಯತೇ ॥೨೩॥**

| | |
|---|---|
| ಜ್ಞಾನಾವಸ್ಥಿತ ಚೇತಸಃ | ಆತ್ಮಜ್ಞಾನದಲ್ಲಿ ನೆಲೆನಿಂತ ಬುದ್ಧಿಯುಳ್ಳವನಾಗಿ (ಆದ್ದರಿಂದ) |
| ಗತಸಙ್ಗಸ್ಯ | ಆತ್ಮೇತರವಿಷಯದಲ್ಲಿ ಮನಸ್ಸಂಗರಹಿತನಾಗಿ (ಆದ್ದರಿಂದ) |
| ಮುಕ್ತಸ್ಯ | ಸರ್ವ ಪರಿಗ್ರಹ ರಹಿತನಾಗಿ (ಮಮತ್ವ ವಿಮುಕ್ತನಾಗಿ) |

| | |
|---|---|
| ಯಜ್ಞಾಯ ಆಚರತಃ, | ಯಜ್ಞಾರ್ಥವಾಗಿ (ಪರಮ ಪುರುಷಾರಾಧನಾರ್ಥವಾಗಿ) ಕರ್ಮಾಚರಣೆ ಮಾಡುವವನಿಗೆ, |
| ಕರ್ಮ ಸಮಗ್ರಂ ಪ್ರವಿಲೀಯತೇ । | ಪ್ರಾಚೀನವು ಪೂರ್ಣ ಕ್ಷಯಿಸುತ್ತದೆ ॥ |

**ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ ।**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮ ಕರ್ಮ ಸಮಾಧಿನಾ ॥೨೪॥**

| | |
|---|---|
| ಬ್ರಹ್ಮಾರ್ಪಣಂ | ಪರಬ್ರಹ್ಮಾತ್ಮಕವಾದ ಅರ್ಪಿಸುವಸಾಧನ (ಮರದ ಸೌಟು=ಸ್ರುಕ್) ಉಳ್ಳ |
| ಬ್ರಹ್ಮ ಹವಿಃ, | ಪರಬ್ರಹ್ಮಾತ್ಮಕವೇ ಆದ ಹವಿಸ್ಸು |
| ಬ್ರಹ್ಮಾಗ್ನೌ, ಬ್ರಹ್ಮಣಾ, | ಪರಬ್ರಹ್ಮಾತ್ಮಕವೇ ಆದ ಅಗ್ನಿಯಲ್ಲಿ, ಪರಬ್ರಹ್ಮಾತ್ಮಕನಾದ |
| ಹುತಮ್ (ಇತಿ) | ಹೋತೃವಿನಿಂದ ಹೋಮ ಮಾಡಲ್ಪಡುತ್ತಿದೆ ಎಂಬುದಾಗಿ |
| ಬ್ರಹ್ಮ-ಕರ್ಮ-ಸಮಾಧಿನಾ | ಬ್ರಹ್ಮಾತ್ಮಕವಾಗಿ ಪರಿಕರಸಹಿತವಾದ ಸಮಗ್ರ ಕರ್ಮವನ್ನೂ (ಸಮ್ಯಕ್) ತನ್ನಲ್ಲಿ ಆಧಾನ ಮಾಡಿಕೊಳ್ಳುವ, (ಅನುಸಂಧಾನ ಮಾಡುವ) |
| ತೇನ, ಬ್ರಹ್ಮ ಏವ | ಆಸಾಧಕನಿಂದ, ಪರಬ್ರಹ್ಮಾತ್ಮಕವಾದ ತನ್ನ ಸ್ವರೂಪವೇ |

| | |
|---|---|
| ಗನ್ತವ್ಯಂ | ಪ್ರಾಪ್ಯವಾಗಿದೆ (ಹೋಗಿಸೇರಬೇಕಾದ ಗುರಿಯಾಗಿದೆ) |

(ಹೀಗೆ ಸಪರಿಕರವಾದ ಕರ್ಮವು, ಪರಬ್ರಹ್ಮನಾಕಾರವೇ ಆಗಿ ಕರ್ಮಯೋಗಿಗೆ ಆತ್ಮಪ್ರಾಪಕವಾಗಿದೆ)

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥**

| | |
|---|---|
| ದೈವಂ ಯಜ್ಞಮ್ ಏವ, ಅಪರೇ | ದೇವಾರ್ಚನರೂಪವಾದ ಯಜ್ಞವನ್ನೇ, ಕೆಲವರು |
| ಯೋಗಿನಃ ಪರ್ಯುಪಾಸತೇ | ಕರ್ಮ ಯೋಗಿಗಳು ತಮ್ಮ ನಿಷ್ಠಾಕೇಂದ್ರವಾಗಿ ಮಾಡಿಕೊಳ್ಳುತ್ತಾರೆ । |
| ಅಪರೇ ಬ್ರಹ್ಮಾಗ್ನೌ ಯಜ್ಞಂ | ಇನ್ನು ಕೆಲವರು ಬ್ರಹ್ಮಾತ್ಮಕವಾದ ಅಗ್ನಿಯಲ್ಲಿ ಬ್ರಹ್ಮಾತ್ಮಕ ಹವಿಸ್ಸನ್ನು |
| ಯಜ್ಞೇನ ಏವ ಉಪಜುಹ್ವತಿ | ಬ್ರಹ್ಮಾತ್ಮ ಸಾಧನದಿಂದಲೇ ಹೋಮ ಮಾಡುತ್ತಾರೆ । (ಇವರದು 'ಹೋಮಯಜ್ಞ' ನಿಷ್ಠೆ। ಅವರದು 'ಅರ್ಚನ ಯಜ್ಞ'ನಿಷ್ಠೆ) |

(ಇಲ್ಲಿಂದಾರಂಭಿಸಿ ೨೨ನೇ ಶ್ಲೋಕ ಪೂರ್ತಿ ಕರ್ಮಯೋಗದ ಕೆಲವಾರು ವಿಧಗಳನ್ನು ತೋರಿಸಲಾಗಿದೆ ಮತ್ತು ಅವುಗಳೆಲ್ಲದರ ಮಹತ್ತ್ವವನ್ನೂ ಸಾಮ್ಯವನ್ನೂ ಹೇಳಲಾಗಿದೆ)

**ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ ವಿಷಯಾನನ್ಯೇ ಇನ್ದ್ರಿಯಾಗ್ನಿಷು ಜುಹ್ವತಿ ॥೨೬॥**

| | |
|---|---|
| ಅನ್ಯೇ ಶ್ರೋತ್ರಾದೀನಿ ಇನ್ದ್ರಿಯಾಣಿ | ಇನ್ನು ಕೆಲವರು ಪಂಚೇಂದ್ರಿಯಗಳನ್ನು |
| ಸಂಯಮಾಗ್ನಿಷು ಜುಹ್ವತಿ | 'ನಿಗ್ರಹ' ಎಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ । |
| ಅನ್ಯೇ ಶಬ್ದಾದೀನ್ ವಿಷಯಾನ್ | ಇನ್ನು ಕೆಲವರು ಶಬ್ದಾದಿ ವಿಷಯಗಳನ್ನು |
| ಇನ್ದ್ರಿಯಾಗ್ನಿಷು ಜುಹ್ವತಿ | ಇನ್ದ್ರಿಯಗಳೆಂಬ ಅಗ್ನಿಯಲ್ಲಿ ಹೋಮ ಮಾಡುತ್ತಾರೆ |

(ಇಲ್ಲಿ ಮೊದಲನೆಯದು 'ಇಂದ್ರಿಯ ನಿಗ್ರಹ ನಿಷ್ಠೆ'। ಎರಡನೆಯದು ''ವಿಷಯಾನಾದರ ನಿಷ್ಠೆ'')
(ಮೊದಲನೆಯದು ಷಡಿಂದ್ರಿಯಗಳು ತಾವಾಗಿ ವಿಷಯಗಳ ಬಳಿಹೋಗದಿರುವುದು । ಎರಡನೆಯದು ವಿಷಯಗಳು ತಾವಾಗಿ ಸಂಪರ್ಕಿಸಿದರೂ ಸ್ವೀಕರಿಸಲ್ಪಡದಿರುವುದು)

**ಸರ್ವಾಣೀಂದ್ರಿಯ ಕರ್ಮಾಣಿ ಪ್ರಾಣಕರ್ಮಾಣಿಚಾಪರೇ ।**
**ಆತ್ಮಸಂಯಮ ಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥೨೭॥**

| | |
|---|---|
| ಅಪರೇ ಜ್ಞಾನದೀಪಿತೇ | ಇನ್ನಿತರಯೋಗಿಗಳು ಆತ್ಮ ಜ್ಞಾನದಿಂದ ಪ್ರಜ್ವಲಿತವಾದ |
| ಆತ್ಮ ಸಂಯಮ ಯೋಗಾಗ್ನೌ | 'ಮನೋನಿಗ್ರಹ ಪ್ರಾಪ್ತಿ' ಎಂಬ ಅಗ್ನಿಯಲ್ಲಿ |
| ಸರ್ವಾಣಿ ಇಂದ್ರಿಯ ಕರ್ಮಾಣಿ | ಎಲ್ಲ ಪಂಚೇಂದ್ರಿಯ ಕರ್ಮಗಳನ್ನೂ |

ಪ್ರಾಣ ಕರ್ಮಾಣಿಚ ಜುಹ್ವತಿ — ಕರ್ಮೇನ್ದ್ರಿಯ ಕರ್ಮಗಳನ್ನೂ ಹೋಮ ಮಾಡುತ್ತಾರೆ.

( ಇದು "ಆತ್ಮಮನಸ್ಕತಾನಿಷ್ಠೆ")

**ದ್ರವ್ಯಯಜ್ಞಾಃ ತಪೋಯಜ್ಞಾಃ ಯೋಗಯಜ್ಞಾಃ ತಥಾಪರೇ ।**
**ಸ್ವಾಧ್ಯಾಯ-ಜ್ಞಾನ-ಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥**

ಅಪರೇ ದ್ರವ್ಯಯಜ್ಞಾಃ — ಇನ್ನು ಕೆಲಯೋಗಿಗಳು :'ದ್ರವ್ಯ ಯಜ್ಞ' ನಿಷ್ಠರು (ಎಂದರೆ ವಿವಿಧ ಭಗವತ್ಕರ್ಮಗಳಿಗಾಗಿ ಧರ್ಮಮಾರ್ಗದಲ್ಲಿ ಹೆಚ್ಚು ದ್ರವ್ಯಾರ್ಜನೆ ಮಾಡಿ ಸದ್ವಿನಿಯೋಗ ಮಾಡುವ ನಿಷ್ಠರು)

ತಪೋಯಜ್ಞಾಃ — ಕೆಲವರು ಕೃಚ್ಛ್ರವ್ರತ-ಚಾಂದ್ರಾಯಣ ವ್ರತ-ಉಪವಾಸ ವ್ರತ ಮುಂತಾದ 'ತಪೋನಿಷ್ಠ'ರು

ಯೋಗಯಜ್ಞಾಃ — ಕೆಲವರು ಪುಣ್ಯ-ತೀರ್ಥ-ಕ್ಷೇತ್ರಾದಿ ಸಂಬಂಧ ಪಡೆಯುವ ನಿಷ್ಠೆಯವರು.

ತಥಾ ಸ್ವಾಧ್ಯಾಯ-ಜ್ಞಾನ ಯಜ್ಞಾಃ। — ಇನ್ನು ಕೆಲವರು ವೇದಾಧ್ಯಯನ ನಿಷ್ಠರು, ಕೆಲವರು ವೇದ-ವೇದಾಂತ-ಶಾಸ್ತ್ರಾರ್ಥ ಜ್ಞಾನ ನಿಷ್ಠರು;

Funding: Tattva Heritage Foundation,Kolkata. Digitization: eGangotri.

ಚ, ಯತಯಃ । ಇವರೆಲ್ಲರೂ ಮತ್ತು ಮುಂದೆ ಹೇಳಲ್ಪಡುವವರೂ, ಕರ್ಮತಃ ಯತ್ನಶೀಲರೇ;

ಸಂಶಿತವ್ರತಾಃ । (ಎಲ್ಲರೂ) ದೃಢವಾದ ಸಂಕಲ್ಪವುಳ್ಳವರೇ (ಅವರವರ ನಿಷ್ಠಾ ಕ್ಷೇತ್ರದಲ್ಲಿ) ॥

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀರುದ್ಧ್ವಾ ಪ್ರಾಣಯಾಮ ಪರಾಯಣಾಃ ॥೨೯॥**

**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ॥**
**ಸರ್ವೇಽಪ್ಯೇತೇ ಯಜ್ಞವಿದಃ ಯಜ್ಞಕ್ಷಪಿತ ಕಲ್ಮಷಾಃ ॥೩೦॥**

**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥೩೧॥**

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋಮುಖೇ ।**
**ಕರ್ಮಜಾನ್ ವಿದ್ಧಿ ತಾನ್ ಸರ್ವಾನ್ ಏವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥**

ಅಪರೇ ಅಪಾನೇ ಪ್ರಾಣಂ ಜುಹ್ವತಿ। ಇನ್ನು ಕೆಲವರು ಅಪಾನದಲ್ಲಿ ಪ್ರಾಣವನ್ನು ಹೋಮಗೈಯುತ್ತಾರೆ । (ಪೂರಕ)

| | |
|---|---|
| ಅಪರೇ ಪ್ರಾಣೇಽಪಾನಂ । | ಇನ್ನು ಕೆಲವರು ಪ್ರಾಣದಲ್ಲಿ ಅಪಾನವನ್ನು ಹೋಮಗೈಯುತ್ತಾರೆ । (ರೇಚಕ) |
| ತಥಾ ಅಪರೇ ಪ್ರಾಣಾಪಾನಗತೀ ರುದ್ಧ್ವಾ, ಪ್ರಾಣಾನ್ ಪ್ರಾಣೇಷು ಜುಹ್ವತಿ । | ಹಾಗೇ ಕೆಲವರು ಪ್ರಾಣಾಪಾನ ಸಂಚಾರ ತಡೆದು ಪ್ರಾಣವನ್ನು ಪ್ರಾಣದಲ್ಲೇ ಹೋಮಗೈಯುತ್ತಾರೆ । (ಈ ಮೂವರು ಕ್ರಮವಾಗಿ 'ಪೂರಕ' ನಿಷ್ಠರು, 'ರೇಚಕ' ನಿಷ್ಠರು ಮತ್ತು 'ಕುಂಭಕ ನಿಷ್ಠರು) |
| ಪ್ರಾಣಾಯಾಮ ಪರಾಯಣಾಃ ನಿಯತಾಹಾರಾಃ | ಈ ಮೂವರು ಪ್ರಾಣಾಯಾಮ ನಿಷ್ಠರಾದ, ಹಾಗೂ ಹಿತಮಿತ ಆಹಾರ ನಿಯಮವುಳ್ಳ ಕರ್ಮ ಯೋಗಿಗಳು । |
| ಸರ್ವೇಽಪಿ ಏತೇ ಯಜ್ಞವಿದಃ, ಯಜ್ಞಕ್ಷಪಿತ ಕಲ್ಮಷಾಃ । | ಈ ಎಲ್ಲರೂ ನಿತ್ಯನೈಮಿತ್ತಿಕರೂಪಯಜ್ಞ ಬಲ್ಲವರು, ಯಜ್ಞದಿಂದ ಕ್ಷಯಿಸಿಹೋದ ಕಲ್ಮಷವುಳ್ಳವರು । |
| ಯಜ್ಞಶಿಷ್ಟಾಮೃತಭುಜಃ । ಯಾನ್ತಿ ಬ್ರಹ್ಮ ಸನಾತನಂ | ಯಜ್ಞ ಶಿಷ್ಟಾಮೃತ ಮಾತ್ರ ಭುಜಿಸುವವರು । ಸದಾ ಅಸ್ತಿತ್ವದಲ್ಲಿರುವ ಬ್ರಹ್ಮಾತ್ಮಕ ಆತ್ಮಸ್ವರೂಪವನ್ನು ಹೊಂದುತ್ತಾರೆ । |
| ಅಯಜ್ಞಸ್ಯನಾಯಂ ಲೋಕೋಽಸ್ತಿ । ಕುತೋಽನ್ಯಃ ಕುರುಸತ್ತಮ! । | ಪಂಚಮಹಾಯಜ್ಞಾದಿ ಪೂರ್ವಕ ನಿತ್ಯನೈಮಿತ್ತಿಕ ಕರ್ಮ ರಹಿತನಾದವನಿಗೆ, ಇಹಲೋಕ ಸೌಖ್ಯವೇ ಇಲ್ಲ. ಅಮೃತತ್ವ ಎಲ್ಲಿಂದ ಬರಬೇಕು ? |

| | |
|---|---|
| ಏವಂ ಬಹುವಿಧಾಯಜ್ಞಾಃ ಬ್ರಹ್ಮಣೋ ಮುಖೇ ವಿತತಾಃ। | ಹೀಗೆ ವಿವಿಧ ರೀತಿಯ ಕರ್ಮಯೋಗಗಳು ಬ್ರಹ್ಮಾತ್ಮಕನಾದ ಸ್ವಾತ್ಮನ ಯಥಾವತ್ ಸಾಕ್ಷಾತ್ಕಾರಕ್ಕಾಗಿ ವಿಸ್ತೃತವಾಗಿ ಹರಡಿವೆ । |
| ತಾನ್‌ಸರ್ವಾನ್ ಕರ್ಮಜಾನ್ ವಿದ್ಧಿ । | ಅವು ಎಲ್ಲವನ್ನೂ ದೈನಂದಿನ ನಿತ್ಯನೈಮಿತ್ತಿಕ ಕರ್ಮಪೂರ್ವಕವಾಗಿಯೇ ಮತ್ತು ಅವುಗಳಂತೆಯೇ ಅನುಷ್ಠಿಸಬೇಕೆಂದು ತಿಳಿ |
| ಏವಂ ಜ್ಞಾತ್ವಾ ವಿಮೋಕ್ಷ್ಯಸೇ । | |

ಹೀಗೆ ಯಥಾವತ್ತಾಗಿ ತಿಳಿದು ನಿತ್ಯಾಚರಣೆ ಮಾಡಿದರೆ ವಿಮುಕ್ತನಾಗುವೆ ॥೩೨॥

(೩೨ ರಿಂದ ೪೨ ಪೂರ್ತಿ,'ಜ್ಞಾನಾಂಶವೇ ಪ್ರಧಾನ ಕರ್ಮಯೋಗದಲ್ಲಿ' ಎಂದು ವಿಶದೀಕರಿಸಲಾಗುತ್ತದೆ)

**ಶ್ರೇಯಾನ್ ದ್ರವ್ಯಮಯಾದ್ ಯಜ್ಞಾತ್ ಜ್ಞಾನಯಜ್ಞಃ ಪರನ್ತಪ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥೩೩॥**

| | |
|---|---|
| ಪರನ್ತಪ! ದ್ರವ್ಯಮಯಾದ್ ಯಜ್ಞಾತ್, | ವಿರೋಧಿನಿಗ್ರಾಹಕನೇ! ದ್ರವ್ಯಪ್ರಧಾನವಾಗಿ ಮಾಡುವ ಕರ್ಮ ಯೋಗಕ್ಕಿಂತ |
| ಜ್ಞಾನಯಜ್ಞಃ ಶ್ರೇಯಾನ್ । | ಜ್ಞಾನಪ್ರಧಾನವಾಗಿ ಮಾಡುವ ಕರ್ಮಯೋಗವು ಶೀಘ್ರ ಫಲಕಾರಿ। |
| ಸರ್ವಂ ಕರ್ಮ, ಅಖಿಲಂ, ಜ್ಞಾನೇ | ಎಲ್ಲ ಕ್ರಿಯೆಯೂ, ಎಲ್ಲ ದ್ರವ್ಯವೂ, ಜ್ಞಾನಭಾಗದಲ್ಲಿ |

Funding: Tattva Heritage Foundation,Kolkata. Digitization: eGangotri.

| | |
|---|---|
| ಪರಿಸಮಾಪ್ಯತೇ | ಪೂರ್ಣಸಾರ್ಥಕತೆ ಹೊಂದುತ್ತದೆ ॥ |

(ಕರ್ಮ ಯೋಗದಲ್ಲಿ (೧) ಕ್ರಿಯಾಭಾಗ (೨) ಶರೀರ-ಇನ್ದ್ರಿಯ-ಇತರ ಪದಾರ್ಥ ಸಾಮಗ್ರಿ, ಎಂಬ ದ್ರವ್ಯಭಾಗ (೩) ಪರಬ್ರಹ್ಮಕ್ಕೆ ಶರೀರವಾಗಿರುವ ಆತ್ಮದ ಜ್ಞಾನನಿಶ್ಚಯ-ಹೀಗೆ ಮೂರು ಭಾಗಗಳು । ಮೊದಲ ಎರಡು ಕಣ್ಣಿಗೆ ಕಾಣುತ್ತವೆ, ಅಪ್ರಧಾನ। ಮೂರನೆಯದು ಲೋಕಕ್ಕೆ ಕಾಣುವುದಿಲ್ಲ, ಅದೇ ಪ್ರಧಾನ । ಅದು ಸಾಧಕನ ಅನುಸಂಧಾನದಲ್ಲಿ ಪ್ರಖರವಾಗಿರಬೇಕು । ಅದರಿಂದಲೇ ದೃಶ್ಯವೂ ಸತ್ಯವೂ ಆದ ಇನ್ನೆರಡು ಭಾಗಗಳೂ ಸಾರ್ಥಕವಾಗಿ ಯೋಗವು ಬೇಗ ಕೈಗೂಡುವುದು)

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥೩೪॥**

| | |
|---|---|
| ತತ್, ತ್ವಂ, ಪ್ರಣಿಪಾತೇನ | ಆ ಆತ್ಮಯಾಥಾತ್ಮ್ಯಜ್ಞಾನವನ್ನೇ, ನೀನು, ಸಮಯನೋಡಿಕೊಂಡು ದಂಡವತ್ ಪ್ರಣಾಮ- |
| ಪರಿಪ್ರಶ್ನೇನ ಸೇವಯಾ | ಪರಿಪ್ರಶ್ನ-ಶುಶ್ರೂಷೆ ಮುಂತಾದ ಮುಖೋಲ್ಲಾಸಕರ ಅನುಚರಣದಿಂದ |
| ವಿದ್ಧಿ । | (ಆತ್ಮದರ್ಶಿಗಳಾದ ಜ್ಞಾನಿಗಳಿಂದ) ಮತ್ತೆ ಮತ್ತೆ ಕೇಳಿ ವಿಶದವಾಗಿ ವಿಶದತರವಾಗಿ ತಿಳಿಯುತ್ತಿರು । |
| ತತ್ತ್ವದರ್ಶಿನಃ ಜ್ಞಾನಿನಃ ತೇ, | ಆತ್ಮಸ್ವರೂಪದರ್ಶನ ಮಾಡಿರುವ ಜ್ಞಾನಿಗಳು ನಿನಗೆ (ನಿನ್ನ ಜಿಜ್ಞಾಸೆ ಮತ್ತು ಯೋಗ್ಯತೆಯ |

| | |
|---|---|
| ಜ್ಞಾನಂ, | ಮಟ್ಟಕ್ಕನುಗುಣವಾಗಿ), ಆತ್ಮತತ್ತ್ವದ ಯಥಾವತ್ತಾದ ಜ್ಞಾನವನ್ನು (ಯೋಗ |
| ಉಪದೇಕ್ಷ್ಯನ್ತಿ | ಪರಿಪಾಕದಶೆಗೆ ಹೋಗುವುದಕ್ಕೆ ಅನುಗುಣವಾಗಿ) ಉಪದೇಶಿಸುತ್ತಾರೆ । |

**ಯಜ್ ಜ್ಞಾತ್ವಾನ ಪುನರ್ ಮೋಹಮ್ ಏವಂ ಯಾಸ್ಯಸಿ ಪಾಣ್ಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋಮಯಿ ॥೩೫॥**

| | |
|---|---|
| ಯತ್, ಜ್ಞಾತ್ವಾ, ಪುನಃ ಏವಂ | ಯಾವ ಆತ್ಮಸ್ವರೂಪವನ್ನು, ಸಾಕ್ಷಾತ್ತಾಗಿ ಯೋಗ ಪರಿಪಾಕದಶೆಯಲ್ಲಿ ಕಂಡುಕೊಂಡ ಮೇಲೆ, |
| ಮೋಹಂ, | ಮತ್ತೆ ಈ ರೀತಿ ದೇಹಾಭಿಮಾನ ರೂಪ ಅಹಂ ಮಮ ವ್ಯಾಮೋಹವನ್ನು, |
| ನ ಯಾಸ್ಯಸಿ ಪಾಣ್ಡವ! । ಯೇನ | ನೀನು ಹೊಂದುವುದೇ ಇಲ್ಲ ಪಾಣ್ಡುಕುಮಾರ!। ಯಾವ ಆಸ್ವಾತ್ಮಸಾಕ್ಷಾರದಿಂದ |
| ಅಶೇಷೇಣ ಭೂತಾನಿ ಆತ್ಮನಿ | ದೇವಾದಿ ಸಕಲ ವರ್ಗದ ಜೀವಿಗಳನ್ನೂ ನಿನ್ನೊಳಗೆ ಕಾಣುವೆ (ಅಂದರೆ ಪೆಟ್ಟಿಗೆಯಲ್ಲಿಟ್ಟಂ- |

ದ್ರಕ್ಷ್ಯಸಿ। ತೆ ಅಲ್ಲ-ಎಲ್ಲ ಶುದ್ಧಾತ್ಮ ಸ್ವರೂಪಗಳೂ ನಿನ್ನ ಆತ್ಮಸ್ವರೂಪದಂತೆಯೇ ಸ್ವಲ್ಪವೂ ವ್ಯತ್ಯಾಸವಿಲ್ಲ ದಂತೆ ಇರುವುದನ್ನು ದರ್ಶನ ಮಾಡುತ್ತೀಯ)

ಅಥೋ ಮಯಿ। ಅನಂತರ ಎಲ್ಲರನ್ನೂ ನನ್ನಲ್ಲಿ ಕಾಣುತ್ತೀಯ (ಎಲ್ಲ ಆತ್ಮಸ್ವರೂಪಗಳ ಸ್ವಾಭಾವಿಕ ಗುಣಗಳೂ ಪರಮಾತ್ಮನಾದ ನನ್ನಂತೆಯೇ ಇರುವುದನ್ನು ದರ್ಶಿಸುತ್ತೀಯ ಎಂದರ್ಥ)!!

("ನಿರಞ್ಜನಃ ಪರಮಂಸಾಮ್ಯಮ್ ಉಪೈತಿ" ಎಂಬ ಉಪನಿಷತ್ತಿನ ಅರ್ಥಸಾಕ್ಷಾತ್ಕಾರವಾಗುತ್ತದೆಂದು ಭಾವ)

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸನ್ತರಿಷ್ಯಸಿ ॥೩೬॥**

(ಸರ್ವೇಭ್ಯಃ ಪಾಪೇಭ್ಯಃ ಪಾಪಕೃತ್ತಮಃ ಅಪಿಚೇದಪಿ) ಎಲ್ಲ ಪಾಪಿಗಳಿಗಿಂತ ಕಡುಪಾಪಿಯಾಗಿದ್ದರೂ ಕೂಡ (ಸರ್ವಂ ವೃಜಿನಂ ಜ್ಞಾನಪ್ಲವೇನ ಏವ ಸಂತರಿಷ್ಯಸಿ) ಎಲ್ಲ ಪಾಪಸಮುದ್ರವನ್ನು ಕರ್ಮಯೋಗಾನ್ತರ್ಗತ ಆತ್ಮಜ್ಞಾನವೆಂಬ ನಾವೆಯಿಂದಲೇ (ಸದ್ಗುರೂಪದೇಶದಿಂದಲೂ ರಂಧ್ರವಿಲ್ಲದ್ದರಿಂದಲೂ ದೃಢವಾಗಿರುವ ಜ್ಞಾನದ ನಾವೆಯಿಂದಲೇ) ಪೂರ್ಣ ದಾಟಿ ಬಿಡುತ್ತೀಯೆ। (ನೀನೇನೂ ಪಾಪಿಯಲ್ಲ, 'ಅನಘ'ನು. ಆದ್ದರಿಂದ ಸಂಸಾರವೆಂಬ ಕರ್ಮಸಮುದ್ರವನ್ನು ದಾಟುವುದು ನಿನಗೇನೂ ಕಷ್ಟವಾಗಲಾರದು ಎಂದು ಭಾವ) ॥೩೬॥

**ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥೩೭॥**

(ಯಥಾ ಸಮಿದ್ಧಃ ಅಗ್ನಿಃ ಏಧಾಂಸಿ ಭಸ್ಮಸಾತ್ ಕುರುತೇ ಅರ್ಜುನ!) ಹೇಗೆ ಪ್ರಜ್ವಲಿಸಲ್ಪಟ್ಟ ಅಗ್ನಿಯು ಇಂಧನವನ್ನೆಲ್ಲ ಭಸ್ಮ ಮಾಡುತ್ತದೆಯೋ, ಅರ್ಜುನ! (ತಥಾ ಸಮಿದ್ಧಃ ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇ) ಅದೇ ರೀತಿ ಚೆನ್ನಾಗಿ ಧಗಧಗಿಸುವ ಆತ್ಮಯಾಥಾತ್ಮ್ಯ-ಜ್ಞಾನ ರೂಪ ಅಗ್ನಿಯು ಸರ್ವಪ್ರಾಚೀನ ಕರ್ಮಗಳನ್ನೂ ಇಲ್ಲವಾಗಿಸುತ್ತದೆ. ॥೩೭॥

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ ॥೩೮)**

(ಹಿ) ಏಕೆಂದರೆ ಆತ್ಮಯಾಥಾತ್ಮ್ಯ ಜ್ಞಾನಾನುಭವಕ್ಕೆ ಸಮಾನವಾದ (ಪವಿತ್ರಂ) ನಿರ್ಮಲೀಕರಣವಸ್ತು ಇಹದಲ್ಲಿ ಇಲ್ಲ (ಈ ಪ್ರಾಕೃತಗಳ ಮಧ್ಯೆ ಎಲ್ಲೂ ಇಲ್ಲ) । (ತತ್) ಅದನ್ನು (ಯೋಗಸಂಸಿದ್ಧಃ) ಗುರೂಪದೇಶಾನುಸಾರ ಪ್ರತಿದಿನವೂ ಆಚರಿಸಲ್ಪಡುವ ಜ್ಞಾನಾಕಾರವಾದ ಕರ್ಮಯೋಗದ ಸಂಸಿದ್ಧಿದಶೆಗೆ ಬಂದವನಾಗಿ (ಕಾಲೇನ) ಸ್ವಲ್ಪ ಕಾಲದಲ್ಲೇ (ಆತ್ಮನಿಸ್ವಯಂ ವಿನ್ದತಿ) ಆತ್ಮಸ್ವರೂಪಾವಿರ್ಭಾವದಲ್ಲೇ ತಾನಾಗಿಯೇ ಪಡೆಯುತ್ತಾನೆ ॥೩೮॥

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾನ್ತಿಮಚಿರೇಣಾಧಿಗಚ್ಛತಿ ॥೩೯॥**

ಉಪದೇಶ ಪಡೆದ ಮೇಲೆ (ಶ್ರದ್ಧಾವಾನ್) ಆ ಜ್ಞಾನದ ವೃದ್ಧಿಯಲ್ಲಿ ಶ್ರದ್ಧಾವಂತನಾಗಿ (ತತ್ಪರಃ) ತದೇಕಾಸಕ್ತನಾಗಿ ಸಂಯಮಕ್ಕೆ ಒಳಪಟ್ಟ ಇಂದ್ರಿಯಗಳ್ಳುಳ್ಳವನಾಗಿ (ಅಚಿರೇಣಜ್ಞಾನಂಲಬ್ಧ್ವಾ) ಸ್ವಲ್ಪ ಕಾಲದಲ್ಲೇ ಆತ್ಮಾನುಭವ ಜ್ಞಾನ ಹೊಂದಿ (ಪರಾಂ ಶಾನ್ತಿಮ್ ಅಚಿರೇಣಾಧಿಗಚ್ಛತಿ) ಪರಮಾನಂದವನ್ನು ಶೀಘ್ರ ಪಡೆಯುತ್ತಾನೆ ॥೩೯॥

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥೪೦॥**

(ಅಜ್ಞಃ) ಉಪದೇಶಲಬ್ಧ ಯಥಾರ್ಥ ಜ್ಞಾನ ರಹಿತನಾದವನೂ, ಉಪದಿಷ್ಟಜ್ಞಾನ ಸಂವರ್ಧನೆಯಲ್ಲಿ ಅಶ್ರದ್ಧಾಳುವೂ, ಉಪದಿಷ್ಟಜ್ಞಾನದಲ್ಲಿ ಸಂಶಯಗಳನ್ನುಳ್ಳವನೂ ವಿನಾಶ ಹೊಂದುತ್ತಾನೆ (ಬುದ್ಧಿನಾಶಾತ್ ಪ್ರಣಶ್ಯತಿ ಎಂದಂತೆ ಒಂದು ಜಂತುವಾಗಿ ಉಸಿರಾಡುತ್ತಿರುತ್ತಾನೆ). ಸಂಶಯಾತ್ಮನಿಗೆ ಪ್ರಾಕೃತ ಲೋಕವೂ ಇಲ್ಲ (ಎಂದರೆ ಧರ್ಮ ಅರ್ಥ ಕಾಮಗಳೇ ಸಿದ್ಧಿಸುವುದಿಲ್ಲ) । ಪರಲೋಕ ಎಂದರೆ ಮೋಕ್ಷವೂ ಇಲ್ಲ. (ನಸುಖಂ) ಅಲ್ಪಸುಖಭಾಗಿತ್ವವೂ ಇಲ್ಲ. ।

**ಯೋಗ-ಸಂನ್ಯಸ್ತ-ಕರ್ಮಾಣಂ, ಜ್ಞಾನ-ಸಂಛಿನ್ನ - ಸಂಶಯಮ್ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನಂತಿ ಧನಞ್ಜಯ ॥೪೧॥**

ಕರ್ಮಯೋಗದಿಂದ - ಜ್ಞಾನದಲ್ಲಿ ಪರಿಸಮಾಪ್ತಿಯಾಗುವಂತಹ-ಕರ್ಮಾಚರಣೆಯುಳ್ಳವನಾದ, ಸಂವರ್ಧಿತ ಜ್ಞಾನದಿಂದ - ಚೆನ್ನಾಗಿ ಕತ್ತರಿಸಲ್ಪಟ್ಟ - ಆತ್ಮಸಂಶಯವುಳ್ಳವನಾದ, ಆತ್ಮವನ್ತ ಎಂದರೆ ಬಲಿಷ್ಠವಾದ ಆತ್ಮನಿಷ್ಠಮನಸ್ಸುಳ್ಳವನನ್ನು, ಪ್ರಾಚೀನ ಕರ್ಮಗಳು (ಅನಂತವಾಗಿ ಕಂಡರೂ) ಬಂಧಿಸುವುದಿಲ್ಲ (ಸಂಸಾರಮಗ್ನನನ್ನಾಗಿಸುವುದಿಲ್ಲ), ಸುಜ್ಞಾನಧನವನ್ನು ಜಯಿಸಲರ್ಹನಾದವನೇ!

**ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮ್, ಆತಿಷ್ಠೋತ್ತಿಷ್ಠ ಭಾರತ! ॥೪೨॥**

ಆದ್ದರಿಂದ ಅನಾದಿ ಅಜ್ಞಾನದ ಕಾರ್ಯವಾದ ಪಾಪಪುಣ್ಯಗಳಿಂದುಂಟಾದ ಹೃದಯಸ್ಥವಾದ ಆತ್ಮನ ಬಗ್ಗೆಯ ಸಂಶಯವನ್ನು (ಜ್ಞಾನಾಸಿನಾ) ಉಪದೇಶವರ್ಧಿತ ದೃಢಜ್ಞಾನವೆಂಬ ದಿವ್ಯ ಖಡ್ಗದಿಂದ, ಛೇದಿಸಿ, (ಏನಂ ಯೋಗಮ್) ನನ್ನಿಂದುಪದಿಷ್ಟವಾದ ಸೂರ್ಯವಂಶದ ಪರಂಪರೆಯಲ್ಲಿ ಪ್ರವಹಿಸಿ ಬಂದಿದ್ದ ಈ ಯೋಗವನ್ನು ಅನುಷ್ಠಾನಮಾಡು! ಎದ್ದೇಳು । ಭರತಕುಲ ಪುತ್ರ ರತ್ನವೇ!

*ಇತಿ ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಜ್ಞಾನಯೋಗೋನಾಮ ಚತುರ್ಥೋಽಧ್ಯಾಯಃ ॥*

॥ ಶ್ರೀಃ ॥

॥ ಶ್ರೀಮತೇ ರಾಮಾನುಜಾಯ ನಮಃ ।.

# ಅಥ ಪಞ್ಚಮಾಧ್ಯಾಯಃ ॥ ೨೯ ಶ್ಲೋ ॥

## (ಭೀಷ್ಮಪರ್ವದಲ್ಲಿ ೨೯ ನೆಯ ಅಧ್ಯಾಯ)

ಅರ್ಜುನ ಉವಾಚ

**ಸಂನ್ಯಾಸಂ ಕರ್ಮಣಾಂ ಕೃಷ್ಣ ! ಪುನರ್ ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥**

ಕೃಷ್ಣ ! ಕರ್ಮಣಾಂ ಸಂನ್ಯಾಸಂ ಶಂಸಸಿ । - ಹೇ ಕೃಷ್ಣ ! ಕರ್ಮಗಳ ಸಂಪೂರ್ಣ ತ್ಯಾಗವನ್ನು ಪ್ರಶಂಸಿಸುತ್ತೀಯೆ। ;ಯೋಗಂ ಚಪುನಃ ಶಂಸಸಿ। - ಕರ್ಮಯೋಗವನ್ನೂ ಮತ್ತೆ ಪ್ರಶಂಸಿಸುತ್ತೀಯೆ; ಏತಯೋಃ ಯತ್ ಏಕಂ ಶ್ರೇಯಃ ಇತಿ ಸುನಿಶ್ಚಿತಂ ತತ್ ಮೇ ಬ್ರೂಹಿ - ಇವೆರಡರಲ್ಲಿ ಯಾವ ಒಂದು ಉತ್ತಮವೆಂದು (ನಿನ್ನಿಂದ) ನಿರ್ಣಯಿಸಲ್ಪಟ್ಟಿದೆಯೋ ಅದನ್ನು ನನಗೆ (ಕೃಪೆಯಿಟ್ಟು) ಹೇಳು ॥

ಶ್ರೀ ಭಗವಾನುವಾಚ

**ಸಂನ್ಯಾಸಃ ಕರ್ಮಯೋಗಶ್ಚ ನಿಶ್ರ್ರೇಯಸ ಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥೨॥**

(ಸಂನ್ಯಾಸಃ ಕರ್ಮಯೋಗಶ್ಚ ಉಭೌ ನಿಶ್ರೇಯಸ ಕರೌ । - ಸಂನ್ಯಾಸವೂ (ಜ್ಞಾನಯೋಗವೂ)

ಕರ್ಮಯೋಗವೂ ಎರಡೂ ಪರಮಫಲವನ್ನೇ ಕೊಡುವಂತಹವು । ; ತಯೋಃ ಕರ್ಮಯೋಗಃತು ಕರ್ಮಸಂನ್ಯಾಸಾತ್ ವಿಶಿಷ್ಯತೇ - ಅವೆರಡರಲ್ಲಿ ಕರ್ಮಯೋಗವೇ ಕರ್ಮನಿವೃತ್ತಿಗಿಂತಲೂ (ಜ್ಞಾನಯೋಗಕ್ಕಿಂತಲೂ) ಶ್ರೇಷ್ಠ ।

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಙ್ಕ್ಷತಿ ।**
**ನಿರ್ದ್ವನ್ದ್ವೋ ಹಿ, ಮಹಾಬಾಹೋ ಸುಖಂ ಬಂಧಾತ್ ಪ್ರಮುಚ್ಯತೇ ॥ ೩॥**

ಯಃ ನ ಕಾಙ್ಕ್ಷತಿ ; ನ ದ್ವೇಷ್ಟಿ; - ಯಾವಾತನು (ಆತ್ಮೇತರ) ಯಾವುದನ್ನೂ ಆಶೀಸುವುದಿಲ್ಲವೋ; (ಆದ್ದರಿಂದಲೇ) ಯಾವುದನ್ನೂ ಯಾರನ್ನೂ, ದ್ವೇಷಿಸುವುದಿಲ್ಲವೋ; (ಆದ್ದರಿಂದಲೇ) ; ನಿರ್ದ್ವನ್ದ್ವಃ - ದ್ವನ್ದ್ವಸಹಿಷ್ಣುವಾಗಿರುವನೋ; ಸಃ ನಿತ್ಯಸಂನ್ಯಾಸೀ ಜ್ಞೇಯಃ । - ಆಕರ್ಮಯೋಗಿಯು ನಿತ್ಯಸಂನ್ಯಾಸಿ (ನಿತ್ಯಜ್ಞಾನನಿಷ್ಠನು) ಎಂದು ತಿಳಿಯಲ್ಪಡುಬೇಕು । ; ಸುಖಂ ಬನ್ಧಾತ್ ಪ್ರಮುಚ್ಯತೇ । - ಸುಖವಾಗಿ ಪ್ರಾಕೃತ ಬಂಧನಗಳಿಂದ ವಿಮುಕ್ತನಾಗುತ್ತಾನೆ ॥೩॥

**ಸಾಙ್ಖ್ಯ ಯೋಗೌ ಪೃಥಗ್ ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಕ್ ಉಭಯೋರ್ ವಿನ್ದತೇ ಫಲಮ್ ॥೪॥**

ಸಾಂಖ್ಯ-ಯೋಗೌ ಪೃಥಕ್ ಬಾಲಾಃ ಪ್ರವದನ್ತಿ । - ಜ್ಞಾನಯೋಗ-ಕರ್ಮಯೋಗಗಳನ್ನು ಬೇರೆಬೇರೆ ಎಂದು 'ಬಾಲಕ'ರು ಹೇಳುತ್ತಾರೆ । ಪಣ್ಡಿತರಲ್ಲ । ; ಉಭಯೋಃ ಏಕಮಪಿ ಸಮ್ಯಕ್ ಆಸ್ಥಿತಃ ; ಫಲಮ್

ವಿನ್ದತೇ )।- ಎರಡರಲ್ಲಿ ಯಾವುದೇ ಒಂದನ್ನು ಸರಿಯಾಗಿ ಅಭ್ಯಾಸ ಮಾಡಿದರೂ; (ಅದೇ) ಫಲವನ್ನು ಪಡೆಯುತ್ತಾನೆ ।

('ಬಾಲಕರು' =ತತ್ತ್ವ-ಹಿತ--ಪುರುಷಾರ್ಥಗಳ ಸರಿಯಾದ ಜ್ಞಾನವಿಲ್ಲದವರು, ಅಲ್ಪಜ್ಞರು)
(ಪಣ್ಡಿತಾಃ=ಸದಾಚಾರ್ಯಾನುಗ್ರಹದಿಂದ ಯಥಾವತ್ತಾದ ಜ್ಞಾನವನ್ನು ದೃಢವಾಗಿ ಪಡೆದವರು)

**ಯತ್ ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ ಯೋಗೈರಪಿ ಗಮ್ಯತೇ ।**
**ಏಕಂ ಸಾಙ್ಖ್ಯಂ ಚ ಯೋಗಂಚ ಯಃ ಪಶ್ಯತಿ ಸ ಪಶ್ಯತಿ ॥೫॥**

ಯತ್ ಸಾಙ್ಖ್ಯೈಃ ಪ್ರಾಪ್ಯತೇ; ತತ್ ಸ್ಥಾನಂ ಯೋಗೈರಪಿ ಗಮ್ಯತೇ ।- ಯಾವುದು ಜ್ಞಾನ ಯೋಗಿಗಳಿಂದ (ಫಲವಾಗಿ) ಹೊಂದಲ್ಪಡುತ್ತದೆಯೋ; ಅದೇ ಸ್ಥಾನವು ಕರ್ಮಯೋಗಿಗಳಿಂದಲೂ ಹೊಂದಲ್ಪಡುತ್ತದೆ (ಸಾಙ್ಖ್ಯಂ ಚ ಯೋಗಂಚ, ಏಕಂ ಯಃ ಪಶ್ಯತಿ, ಸಃ ಪಶ್ಯತಿ ) - ಜ್ಞಾನಯೋಗವನ್ನೂ ಕರ್ಮಯೋಗವನ್ನೂ, ಒಂದೇ ಸಮನಾಗಿ ಯಾವಾತನು ಕಾಣಬಲ್ಲನೋ, ಆತನೇ ಸರಿಯಾದ ಅರಿವು ಇರುವವನು ॥ (ಆ ಸ್ಥಾನವು ಆತ್ಮದರ್ಶನ ಸ್ಥಿತಿ ಎಂಬ ಫಲ) ॥೫॥

**ಸಂನ್ಯಾಸಸ್ತು ಮಹಾಬಾಹೋ ದುಃಖ ಮಾಪ್ತು ಮಯೋಗತಃ ।**
**ಯೋಗಯುಕ್ತೋ ಮುನಿರ್ ಬ್ರಹ್ಮ ನಚಿರೇಣಾಧಿಗಚ್ಛತಿ ॥೬॥**

(ಸಂನ್ಯಾಸಸ್ತು ಅಯೋಗತಃ ಆಪ್ತುಂ ದುಃಖಮ್ ) - ಜ್ಞಾನಯೋಗವಾದರೋ ಕರ್ಮಯೋಗವಿಲ್ಲದೆ

ಹೊಂದಲ್ಪಡುವುದು ಕಷ್ಟ ।; (ಯೋಗಯುಕ್ತಃ ಮುನಿಃ, ನಚಿರೇಣ, ಬ್ರಹ್ಮ ಅಧಿಗಚ್ಛತಿ) ಕರ್ಮಯೋಗಯುಕ್ತನಾದ ಆತ್ಮ ಮನನಶೀಲನು, ಬೇಗನೆಯೇ, ಆತ್ಮವಸ್ತು ಹೊಂದಿಬಿಡುತ್ತಾನೆ ॥೬॥

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇನ್ದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥೭॥**

(ಯೋಗಯುಕ್ತಃ ವಿಶುದ್ಧಾತ್ಮಾ । - ಕರ್ಮಯೋಗಿಯು ವಿಶೇಷವಾಗಿ ಶುದ್ಧಮನಸ್ಕನು । (ವಿಜಿತಾತ್ಮಾ) - (ಆದ್ದರಿಂದಲೇ) ಹತೋಟಿಯಲ್ಲಿರುವ ಮನಸುಳ್ಳವನು । (ಜಿತೇನ್ದ್ರಿಯಃ) - (ಆದ್ದರಿಂದಲೇ) ಬಾಹ್ಯೇನ್ದ್ರಿಯಜಯವುಳ್ಳವನು ।; ಸರ್ವ-ಭೂತ-ಆತ್ಮ ಭೂತ-ಆತ್ಮಾ । - ಸುರನರತಿರ್ಯಕ್‌ಸ್ಥಾವರ ಎಂಬ ಎಲ್ಲ ಜೀವಿಗಳ ಆತ್ಮದಂತೆಯೇ ಇರುವ - ಆತ್ಮಾ ತಾನು ಎಂಬ ಪ್ರಜ್ಞೆ ಉಳ್ಳವನು ।; (ಕುರ್ವನ್ನಪಿ ನಲಿಪ್ಯತೇ ।- (ಆದ್ದರಿಂದಲೇ) ಕರ್ಮ ಮಾಡುತ್ತಿದ್ದರೂ ಲೇಪಹೊಂದುವುದಿಲ್ಲ ॥೭॥

**ನೈವ ಕಿಞ್ಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್, ಗಚ್ಛನ್ ಸ್ವಪನ್ ಶ್ವಸನ್ ॥೮॥**

**ಪ್ರಲಪನ್ ವಿಸೃಜನ್ ಗೃಹ್ಣನ್ ಉನ್ಮಿಷನ್ ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥೯॥**

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥೧೦॥**

(ಯುಕ್ತಃ ತತ್ತ್ವವಿತ್, ಪಶ್ಯನ್, ಶೃಣ್ವನ್, ಸ್ಪೃಶನ್, ಜಿಘ್ರನ್, ಅಶ್ನನ್) - ಕರ್ಮಯೋಗಯುಕ್ತನು ಆತ್ಮತತ್ತ್ವಜ್ಞನಾಗಿ, ನೋಡುವುದು, ಕೇಳುವುದು, ಸ್ಪರ್ಶಿಸುವುದು, ಆಘ್ರಾಣಿಸುವುದು, ತಿನ್ನುವುದು (ಎಂಬ ಪಂಚಜ್ಞಾನೇಂದ್ರಿಯ ಕರ್ಮಗಳನ್ನು) ಮಾಡುತ್ತಿದ್ದರೂ (ಗಚ್ಛನ್, ಗೃಹ್ಣನ್, ಪ್ರಲಪನ್ ವಿಸೃಜನ್ ) - ಹೋಗುವುದು, ತೆಗೆದುಕೊಳ್ಳುವುದು, ಮಾತಾಡುವುದು, ವಿಸರ್ಜಿಸುವುದು (ಎಂಬ ಪಂಚಕರ್ಮೇಂದ್ರಿಯ ಕ್ರಿಯೆಗಳನ್ನು) ಮಾಡುತ್ತಿದ್ದರೂ, (ಸ್ವಪನ್, ಶ್ವಸನ್, ಉನ್ಮಿಷನ್, ನಿಮಿಷನ್ ಅಪಿ) ; ಮಲಗುವುದು, ಉಸಿರಾಡುವುದು ಕಣ್ಣು ತೆರೆಯುವುದು, ಕಣ್ಮುಚ್ಚುವುದು (ಎಂಬ ಪ್ರಾಣವಾಯು ಕರ್ಮಗಳನ್ನು) ಮಾಡುತ್ತಿದ್ದರೂ (ಇನ್ದ್ರಿಯಾಣಿ ಇನ್ದ್ರಿಯಾರ್ಥೇಷು ವರ್ತನ್ತೇ ಇತಿ ಧಾರಯನ್ ) (ನೈವ ಕಿಂಚಿತ್ ಕರೋಮಿ ಇತಿ ಮನ್ಯೇತ) - ಇಂದ್ರಿಯಗಳೂ (ಪ್ರಾಣವಾಯುಗಳೂ) ತಮ್ಮ ತಮ್ಮ ವಿಷಯದಲ್ಲಿ ಪ್ರವರ್ತಿಸುತ್ತಿವೆ ಎಂದು ಅನುಸಂಧಾನ ಮಾಡುತ್ತಾ 'ನಾನೇನನ್ನೂ ಮಾಡುತ್ತಿಲ್ಲ' ಎಂದು ಭಾವಿಸಬೇಕು ॥ (ಬ್ರಹ್ಮಣಿ ಕರ್ಮಾಣಿ ಆಧಾಯ; ಸಙ್ಗಂ ತ್ಯಕ್ತ್ವಾ; ಯಃ ಕರೋತಿ; ಸಃ, ಪದ್ಮಪತ್ರಂ ಅಮ್ಭಸಾ ಇವ, ಪಾಪೇನ ನಲಿಪ್ಯತೇ) - ಹೀಗೆ ಬ್ರಹ್ಮಾತ್ಮಕ ಪ್ರಕೃತಿಯಲ್ಲಿ ಕರ್ಮಗಳನ್ನು ಆರೋಪಿಸಿ; ಕರ್ತೃತ್ವಾದಿಸಙ್ಗತ್ರಯವನ್ನು ಬಿಟ್ಟು, ಯಾರು (ವಿಹಿತ ಕರ್ಮ) ಮಾಡುತ್ತಾನೋ; ಅವನು, ಕಮಲದೆಲೆಯು ನೀರಿನಿಂದ ಹೇಗೋ ಹಾಗೆ, ಪಾಪದಿಂದ ಲೇಪಹೊಂದುವುದಿಲ್ಲ ॥೧೦॥

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂತ್ಯಕ್ತ್ವಾತ್ಮಶುದ್ಧಯೇ ॥೧೧॥**

(ಕೇವಲೈಃ, ಕಾಯೇನ, ಮನಸಾ ಬುದ್ಧ್ಯಾ, ಇನ್ದ್ರಿಯೈರಪಿ) - ಅಹಂಕಾರಮಿಳಿತವಾಗದ ಕೇವಲ ಪ್ರಕೃತಿಮಯವಾದ, ಕಾಯ, ಮನಸ್ಸು, ಬುದ್ಧಿ, ಇಂದ್ರಿಯಗಳಿಂದ (ಯೋಗಿನಃ ಕರ್ಮ, ಸಙ್ಗಂತ್ಯಕ್ತ್ವಾ, ಆತ್ಮವಿಶುದ್ಧಯೇ, ಕುರ್ವನ್ತಿ) - ಕರ್ಮಯೋಗಾನುಷ್ಠಾನ ಪಟುಗಳು ಕರ್ಮವನ್ನು, ಖ್ಯಾತಿ ಲಾಭಸಂಮಾನಾದಿಫಲಸಂಗಬಿಟ್ಟು, ಆತ್ಮಗತ ಪ್ರಾಚೀನದ ಮಾರ್ಜನೆಗಾಗಿ, ಆಚರಿಸುತ್ತಾರೆ ॥೧೧॥

**ಯುಕ್ತಃ ಕರ್ಮಫಲಂತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ, ಕಾಮಕಾರೇಣ, ಫಲೇ ಸಕ್ತೋ, ನಿಬಧ್ಯತೇ ॥೧೨॥**

(ಯುಕ್ತಃ ಕರ್ಮಫಲಂತ್ಯಕ್ತ್ವಾ, ನೈಷ್ಠಿಕೀಂ ಶಾನ್ತಿಂ, ಆಪ್ನೋತಿ) - ಕರ್ಮಯೋಗಿಯು ಕರ್ಮಫಲವನ್ನು ತ್ಯಜಿಸಿ, ತನ್ನನಿಷ್ಠೆಗನುಗುಣವಾದ ಆತ್ಮಾನುಭವಾನಂದವನ್ನು ಹೊಂದುತ್ತಾನೆ ।
(ಯೋಗ ಕೌಶಲವಿಲ್ಲದವನು, ಮನಬಂದಂತೆ ವರ್ತಿಸಿ, ಕರ್ಮ ಫಲಗಳಲ್ಲಿ ಅಂಟಿಕೊಂಡು, ನಿತ್ಯಬದ್ಧನಾಗುತ್ತಾನೆ ॥)

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇಪುರೇ ದೇಹೀ ನೈವ ಕುರ್ವನ್ ನಕಾರಯನ್ ॥೧೩॥**

(ಮನಸಾಸರ್ವಕರ್ಮಾಣಿ, ನವದ್ವಾರೇ ಪುರೇ ದೇಹೀ ಸಂನ್ಯಸ್ಯ) - (ವಿವೇಕ ಶೀಲ) ಮನಸ್ಸಿನಿಂದ ಎಲ್ಲ

ಕ್ರಿಯೆಗಳನ್ನು 'ಒಂಭತ್ತು ಬಾಗಿಲುಳ್ಳ ಪಟ್ಟಣ'ದಲ್ಲಿ ಒಪ್ಪಿಸಿ (ದೇಹೀ, ವಶೀ) ದೇಹಧಾರಿ ಚೇತನನು, ಸ್ವರೂಪಾನುಸಂಧಾನದಿಂದ ಸ್ವವಶನಾಗಿ;(ನೈವಕುರ್ವನ್, ನ ಕಾರಯನ್ ; ಸುಖಮ್ ಆಸ್ತೇ)- ತಾನು ಮಾಡುವವನು 'ಎನಿಸದೆ;' 'ಮಾಡಿಸುವವ'ನು ಎಂದೂ ಎನಿಸದೆ ; ನೆಮ್ಮದಿಯಾಗಿ ಕುಳ್ಳಿರುತ್ತಾನೆ ॥೩॥ (ಇಲ್ಲಿಯವರೆಗೆ ಇಂದ್ರಿಯ-ಪ್ರಾಣ-ಮನೋ-ಬುದ್ಧಿ-ಶರೀರಗಳಲ್ಲಿ ಕರ್ಮಕರ್ತೃತ್ವವನ್ನಾರೋಪಿಸಿ ತನ್ನಲ್ಲಿ ಕರ್ತೃತ್ವವಿಲ್ಲವೇ ಇಲ್ಲ ಎಂದು ಅನುಸಂಧಾನ ಮಾಡುವುದು ಕರ್ಮಯೋಗಿಗೆ ಅವಶ್ಯಕ ಎಂದು ಹೇಳಲಾಯಿತು. ಇನ್ನು ೧೪-೧೬ ಪೂರ್ತಿ ಆತ್ಮನ ಸ್ವಾಭಾವಿಕ ರೂಪದ ಅನುಸಂಧಾನ, ಅದರಿಂದ ಅಕರ್ತೃತ್ವದ ದೃಢೀಕರಣ)

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿಪ್ರಭುಃ ।**
**ನ ಕರ್ಮಫಲ ಸಂಯೋಗಮ್ ಸ್ವಭಾವಸ್ತು ಪ್ರವರ್ತತೇ ॥೧೪॥**

(ಲೋಕಸ್ಯ ; ಪ್ರಭುಃ, ಕರ್ತೃತ್ವಂನ, ಕರ್ಮಾಣಿನ, ಕರ್ಮಫಲ ಸಂಯೋಗಂನ, ಸೃಜತಿ ।- ಸುರ, ನರ, ತಿರ್ಯಕ್ ಸ್ಥಾವರ ರೂಪವಾಗಿರುವ ಲೋಕಕ್ಕೆ ; ಚೈತನ್ಯ ಪ್ರದನಾದ ರೂಪಶುದ್ಧ ಚೇತನನು, ಆಯಾ ಜಾತಿಗೆ ಅರ್ಹವಾದ ಕರ್ತೃತ್ವವನ್ನಾಗಲಿ, ಕರ್ಮಗಳನ್ನಾಗಲಿ, ಕರ್ಮಫಲಸಂಗವನ್ನಾಗಲಿ, ತಾನು ಉಂಟುಮಾಡುವುದಿಲ್ಲ । (ಸ್ವಭಾವಸ್ತು ಪ್ರವರ್ತತೇ ) - ಅನಾದಿಕಾಲ ಪ್ರವೃತ್ತ ಪ್ರಾಕೃತವಾಸನೆಯೇ ಇವುಗಳಲ್ಲಿ ಪ್ರವರ್ತಿಸುತ್ತದೆ ॥೧೪॥

**ನಾದತ್ತೇ ಕಸ್ಯ ಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನಮುಹ್ಯನ್ತೀ ಜನ್ತವಃ ॥೧೫॥**

(ವಿಭುಃ; ಕಸ್ಯಚಿತ್ ಪಾಪಂ ನಾದತ್ತೇ ಏವ) - ಎಲ್ಲವಿಧದೇಹ ಪ್ರವೇಶಯೋಗ್ಯನಾಗಿ ಅಪಾರ ಪ್ರಾಚೀನ ಕರ್ಮವುಳ್ಳ ಈ ಚೇತನ ; ಯಾವುದೇ ಇಷ್ಟ ಜನರ ಪಾಪ ಫಲವನ್ನು (ತನ್ನ ಕೆಲಸದಿಂದ) ಹೋಗಲಾಡಿಸುವುದೇ ಇಲ್ಲ । (ಸುಕೃತಂ ನ ಏವಚ) - ಯಾವುದೇ ಶತ್ರುವೆನಿಸಿದವನ ಪುಣ್ಯಫಲವನ್ನು (ತನ್ನ ಕೆಲಸದಿಂದ) ಹೋಗಲಾಡಿಸುವುದಿಲ್ಲ । (ಅಜ್ಞಾನೇನ ಜ್ಞಾನಮಾವೃತಮ್ । - ಜ್ಞಾನವಿರೋಧಿಯಾದ ಪ್ರಾಚೀನದಿಂದ, ಆತ್ಮನಸ್ವಾಭಾವಿಕ ಜ್ಞಾನವು ಮುಚ್ಚಲ್ಪಟ್ಟು ಸಂಕುಚಿತವಾಗಿದೆ ।( ತೇನ ಜನ್ತವಃ ಮುಹ್ಯನ್ತಿ ।) ಆದರಿಂದ ಜೀವಿಗಳು ಆಯಾ ದೇಹಾತ್ಮ ಭ್ರಮವುಳ್ಳವರು ಆಗಿರುತ್ತಾರೆ ॥೧೫॥

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ ಜ್ಞಾನಂ ಪ್ರಕಾಶಯತಿ ತತ್ ಪರಮ್ ॥೧೬॥**

(ಆತ್ಮನಃ ಜ್ಞಾನೇನ ತು) - ಉಪದೇಶ ಮತ್ತು ಅಭ್ಯಾಸಗಳಿಂದ ಬೆಳೆದ ಆತ್ಮಜ್ಞಾನದಿಂದಲಾದರೋ ; - (ತದ್ ಅಜ್ಞಾನಂ ಯೇಷಾಂನಾಶಿತಮ್) - ಆ ಅಜ್ಞಾನವು ಯಾವ ಕೆಲವರಿಗೆ ನಾಶವಾಗಿದೆಯೋ ; - (ತೇಷಾ ತತ್, ಪರಂ, ಜ್ಞಾನಮ್) - ಅವರಿಗೆ ಆ ಸ್ವಾಭಾವಿಕ, ಅಪರಿಮಿತ ಅಸಂಕುಚಿತ ಜ್ಞಾನವು ; (ಆದಿತ್ಯವತ್ ಪ್ರಕಾಶಯತಿ)- ಸೂರ್ಯನಂತೆ ಎಲ್ಲವನ್ನೂ ಯಥಾವತ್ತಾಗಿ ಬೆಳಗುತ್ತದೆ ॥

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾತಃ ತತ್ಪರಾಯಣಾ : ।**
**ಗಚ್ಛನ್ತ್ಯ ಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥೧೭॥**

(ತದ್ಬುದ್ಧಯಃ, ತದಾತ್ಮಾನಃ ತನ್ನಿಷ್ಠಾಃ, ತತ್ ಪರಾಯಣಾಃ) - ಅಂತಹ ಆತ್ಮದರ್ಶನದ ದೃಢ ಸಂಕಲ್ಪವಂತರು, ಅದೇ ಮನಸ್ಸಿನಿಂದ ಅನುಸಂಧಾನನಿರತರು, ಅದನ್ನೇ ಪರಮ ಪ್ರಯೋಜನವಾಗಿ ಭಾವಿಸಿರುವವರು। ಇಂತಹವರು (ಜ್ಞಾನ-ನಿರ್ಧೂತ-ಕಲ್ಮಷಾಃ) - ಅದೇ ಜ್ಞಾನದಿಂದ, ತೊಳೆಯಲ್ಪಟ್ಟ-ಪ್ರಾಚೀನ ಕಶ್ಮಲವುಳ್ಳವರಾಗಿ; (ಅಪುನರಾವೃತ್ತಿಂ ಗಚ್ಛನ್ತಿ) - ಪುನರಾವೃತ್ತಿ ರಹಿತವಾದ ಶುದ್ಧಾತ್ಮದಶೆಯನ್ನು ಹೊಂದಿಬಿಡುತ್ತಾರೆ॥೧೭॥

**ವಿದ್ಯಾವಿನಯ ಸಂಪನ್ನೇ, ಬ್ರಾಹ್ಮಣೇ, ಗವಿ, ಹಸ್ತಿನಿ ।**
**ಶುನಿ ಚೈವ , ಶ್ವಪಾಕೇ ಚ, ಪಣ್ಡಿತಾಃ, ಸಮದರ್ಶಿನಃ ॥೧೮॥**

ವಿದ್ಯೆ ವಿನಯ ಇವುಗಳಿಂದ ಸಂಪನ್ನನಾದವನಲ್ಲೂ, ಜಾತಿ ಮಾತ್ರದಿಂದ ಬ್ರಾಹ್ಮಣನಾದವನಲ್ಲೂ, ಗೋವಿನಲ್ಲೂ, ಆನೆಯಲ್ಲೂ, ನಾಯಲ್ಲೂ, ನಾಯಿಬೇಯಿಸುವ ಚಂಡಾಲನಲ್ಲೂ ಕೂಡ, - ಆತ್ಮಜ್ಞಾನ ಪೂರ್ಣರಾದವರು ; ಜ್ಞಾನಮಯ ಸ್ವರೂಪದಿಂದ ಒಂದೇ ಸಮನಾಗಿರುವ ಆತ್ಮನನ್ನೇ ಕಾಣುತ್ತಾರೆ.

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ।**
**ನಿರ್ದೋಷಂಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾ : ॥೧೯॥**

(ಯೇಷಾಂಮನಃ ಸಾಮ್ಯೇ ಸ್ಥಿತಂ;ತೈಃ ಇಹೈವಜಿತಃ ಸರ್ಗಃ)-(ಹೀಗೆ) ಯಾರಮನಸ್ಸು ಸಮದರ್ಶನದಲ್ಲಿ

ನೆಲೆನಿಂತಿದೆಯೋ ; ಅವರು ಈ ಸಾಧನಾನುಷ್ಠಾನ (ಕರ್ಮಯೋಗ) ದಶೆಯಲ್ಲೇ ಸಂಸಾರವನ್ನು ಜಯಿಸಿದ್ದಾರೆ (ನಿರ್ದೋಷಂ ಹಿ ಸಮಂ ಬ್ರಹ್ಮ) - ಸ್ವಭಾವತಃ ದೋಷರಹಿತವಾದ್ದರಿಂದ ಸರ್ವತ್ರಸಮವಾಗಿರುವಂತಹುದೇ ಬ್ರಹ್ಮವೆನಿಸುತ್ತದೆ। (ತಸ್ಮಾದ್ ಬ್ರಹ್ಮಣಿತೇ ಸ್ಥಿತಾಃ) - ಆದ್ದರಿಂದ ಬ್ರಹ್ಮದಲ್ಲೇ ಅವರು ಸುಸ್ಥಿತಾಗಿದ್ದಾರೆ ॥೧೯॥

ಯಾವ ರೀತಿ ಇದ್ದರೆ ಕರ್ಮಯೋಗಿಗೆ ಸಮದರ್ಶನ ರೂಪ ಜ್ಞಾನವಿಪಾಕ ಉಂಟಾಗುತ್ತದೆಯೋ, ಅದನ್ನೀಗ ಹೇಳಲಾಗುತ್ತದೆ.-

**ನಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯಚಾ ಪ್ರಿಯಮ್ ।**
**ಸ್ಥಿರಬುದ್ಧಿರ ಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥೨೦॥**

(ಪ್ರಿಯಂ ಪ್ರಾಪ್ಯ ನಪ್ರಹೃಷ್ಯೇತ್) - ಪ್ರಾಕೃತಪ್ರಿಯವನ್ನು ಪಡೆದಾಗ ಅತ್ಯಂತ ಹರ್ಷಗೊಳ್ಳಬಾರದು (ಅಪ್ರಿಯಂ ಪ್ರಾಪ್ಯ ನೋದ್ವಿಜೇತ್ ಚ) - ಪ್ರಾಕೃತ ಅಪ್ರಿಯವನ್ನು ಹೊಂದಿದಾಗ ದುಃಖಭಯ ಕೋಪಾದಿ ಉದ್ವೇಗಹೊಂದಬಾರದು ।; (ಸ್ಥಿರ ಬುದ್ಧಿಃ) - ಸ್ಥಿರವಾದ ಆತ್ಮದಲ್ಲಿ ನೆಲೆನಿಂತ ಬುದ್ಧಿಹೊಂದಿರಬೇಕು ।; - (ಅಸಂಮೂಢಃ) - ಅಸ್ಥಿರವಾದ ದೇಹದಲ್ಲಿ ತನ್ನನ್ನು ಏಕೀಕರಿಸಿ ಮೂಢನಾಗಬಾರದು ।; - (ಬ್ರಹ್ಮವಿತ್, ಬ್ರಹ್ಮಣಿಸ್ಥಿತಃ) - ಉಪದೇಶ ಜನ್ಯ ಆತ್ಮಜ್ಞಾನವುಳ್ಳವನಾಗಿ, ಆತ್ಮಾನುಸಂಧಾನಾಭ್ಯಾಸನಿಷ್ಠನಾಗಿರಬೇಕು ॥೨೦॥

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥**

(ಬಾಹ್ಯಸ್ಪರ್ಶೇಷು ಅಸಕ್ತಾತ್ಮಾ ; ಯತ್ ಆತ್ಮನಿ ಸುಖಂ ವಿನ್ದತಿ ; ಸಃ ಬ್ರಹ್ಮಯೋಗಯುಕ್ತಾತ್ಮಾ ; ಅಕ್ಷಯಂ ಸುಖಮ್ ಅಶ್ನುತೇ ।- (ಹೀಗೆ) ಬಾಹ್ಯವಿಷಯ ಸಂಪರ್ಕದಲ್ಲಿ ಅಂಟದ ಮನಸ್ಸುಳ್ಳವನಾಗಿ ; ಯಾವಾತನು ಆತ್ಮದಲ್ಲೇ ಸುಖ ಪಡೆಯುತ್ತಾನೋ ; ಆತನು ಆತ್ಮಾಭ್ಯಾಸಯೋಗಯುಕ್ತವಾದ ಮನಸ್ಸುಳ್ಳವನಾಗಿ ; ಆತ್ಮಾನಂದ (ಬ್ರಹ್ಮಾನಂದ) ವನ್ನು ಅನುಭವಿಸುತ್ತಾನೆ ॥೨೧॥

(ಪ್ರಾಕೃತಭೋಗ ಬಿಡುವುದು ಸುಲಭ ; ಏಕೆಂದರೆ )

**ಯೇ ಹಿ ಸಂಸ್ಪರ್ಶಜಾ ಭೋಗಾಃ ದುಃಖಯೋನಯ ಏವ ತೇ ।**
**ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥೨೨॥**

(ಯೇ ಸಂಸ್ಪರ್ಶಜಾ ಭೋಗಾಃ, ತೇ ದುಃಖಯೋನಯ ಏವ, ಹಿ) - ಯಾವುವು ವಿಷಯಸಂಪರ್ಕಜನ್ಯಭೋಗಗಳೋ, ಅವು ದುಃಖಜನಕಗಳೇ ಎಂಬುದು ಅನುಭವಸಿದ್ಧ ।; (ಆದ್ಯವನ್ತಃ) ( ಕೌನ್ತೇಯ ! ಬುಧಃ ತೇಷು ನ ರಮತೇ) - ಅವು ಹಿಂದೆ ಇರುವುದಿಲ್ಲ ಪ್ರಾರಂಭವಾದ ಮೇಲೆ ಹೆಚ್ಚು ಹೊತ್ತು ಉಳಿಯುವುದಿಲ್ಲ । ಕುನ್ತೀಸುತನೇ ! ಜಾಣನು ಅವುಗಳಲ್ಲಿ ರಮಿಸುವುದಿಲ್ಲ ॥೨೨॥

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್‌ಶರೀರ ವಿಮೋಕ್ಷಣಾತ್ ।**
**ಕಾಮಕ್ರೋಧೋದ್ ಭವಂ ವೇಗಂ ಸಯುಕ್ತಃ ಸ ಸುಖೀ ನರಃ ॥೨೩॥**

(ಯಃ ಶರೀರ ವಿಮೋಕ್ಷಣಾತ್ ಪ್ರಾಕ್, ಇಹ ಏವ ಕಾಮಕ್ರೋಧೋದ್‌ಭವಂ ವೇಗಂ, ಸೋಢುಂ ಶಕ್ನೋತಿ ; ಸಃಯುಕ್ತಃ) - ಯಾವಾತನು ಶರೀರ ಬಿಡುವ ಮುನ್ನ, ಇಲ್ಲಿ ಸಾಧನದಶೆಯಲ್ಲೇ ಕಾಮಕ್ರೋಧ ಜನ್ಯವಾದ ಉದ್ರೇಕವನ್ನು, ನಿರೋಧಿಸಲು ಶಕ್ತನಾಗುತ್ತಾನೆಯೋ; ಆತನು ಯೋಗ್ಯನು (ಆತ್ಮಾನುಭವಕ್ಕೆ ಯೋಗ್ಯನು) ।; - (ಸಃ ನರಃ ಸುಖೀ) - ಆನರನೇ (ಶರೀರ ವಿಮೋಚನಾನನರ್ತ) ಆತ್ಮಾನುಭವದ ಪರಮ ಸುಖಮಗ್ನನಾಗುವಂತಹನು ।. (ಹೀಗೆ ಕೈವಲ್ಯ ಯೋಗ್ಯವಾದ ನರನ ಲಕ್ಷಣ) ।೨೩॥

**ಯೋಽನ್ತಃ ಸುಖೋಽನ್ತರಾರಾಮಃ ತಥಾನ್ತರ್ ಜ್ಯೋತಿರೇವ ಯಃ ।**
**ಸಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥**

ಯಾವಾತನು ಒಳಗೇ (ಆತ್ಮದಲ್ಲೇ) ಸುಖಕಾಣುವನೋ, ಒಳಗೇ ವಿಹಾರೋದ್ಯಾನ ಕಾಣುವನೋ, ಹಾಗೇ ಒಳಗೇ ಜ್ಞಾನಜ್ಯೋತಿ ಕಾಣುವನೋ, (ಸಃಬ್ರಹ್ಮಭೂತಃ ಯೋಗೀ) ಆ ಆತ್ಮಮಯನೇ ಆಗಿರುವ ಯೋಗಿಯು, (ಬ್ರಹ್ಮನಿರ್ವಾಣಮ್ ಅಧಿಗಚ್ಛತಿ) ಆತ್ಮಾನುಭವವದ ಶಾಶ್ವತಾನಂದವನ್ನೇ ಪಡೆದು ಬಿಡುತ್ತಾನೆ (ಹಿಗೆ ಯೋಗ್ಯನಾದ ಕರ್ಮಯೋಗಿಯು ಏಕಾನ್ತ ಸಮಯದಲ್ಲಿ ವರ್ತಿಸುವ ರೀತಿ) ॥೨೪॥

**ಲಭನ್ತೇ ಬ್ರಹ್ಮನಿರ್ವಾಣಮ್ ಋಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾಃ ಯತಾತ್ಮಾನಃ ಸರ್ವಭೂತಹಿತೇ ರತಾಃ ॥೨೫॥**

(ಛಿನ್ನದ್ವೈಧಾಃ, ಯತಾತ್ಮಾನಃ, ಕ್ಷೀಣ ಕಲ್ಮಷಾಃ ಸರ್ವ ಭೂತಹಿತೇ ರತಾಃ, ಋಷಯಃ, ಬ್ರಹ್ಮನಿರ್ವಾಣಂಲಭನ್ತೇ) - ದ್ವನ್ದ್ವಾತೀತರಾದ, ಆತ್ಮದಲ್ಲಿ ನಿಯಮಿತವಾದ ಮನಸ್ಸುಳ್ಳವರಾದ, ಪ್ರಾಚೀನ ಕಲ್ಮಷವೆಲ್ಲ ಕ್ಷಯಿಸಿರುವವರಾದ, ತನ್ನಂತೆ ಇತರ ಎಲ್ಲ ಜೀವಿಗಳ ಹಿತದಲ್ಲಿ ನಿರತರಾದ, ಆತ್ಮಾವಲೋಕನ ಮಾರ್ಗದಲ್ಲಿ ಮುಂದುವರಿದವರಾಗ, ಕರ್ಮಯೋಗಿಗಳು ಬ್ರಹ್ಮಾ (ಆತ್ಮಾ) ನಂದ ಸಾಮ್ರಾಜ್ಯವನ್ನು ಪಡೆದು ಬಿಡುತ್ತಾರೆ. । (ಯೋಗ್ಯನಾದವನ ಬಾಹ್ಯ ವರ್ತನೆ ಹೀಗೆ) ॥ ೨೫॥

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋಬ್ರಹ್ಮ ನಿರ್ವಾಣಮ್ ವರ್ತತೇ ವಿಜಿತಾತ್ಮನಾಮ್ ॥೨೬॥**

(ಕಾಮಕ್ರೋಧವಿಯುಕ್ತಾನಾಮ್; ಯತೀನಾಂ; ಯತಚೇತಸಾಂ; ವಿಜಿತ್ಮನಾಮ್; ಬ್ರಹ್ಮನಿರ್ವಾಣಮ್ ಅಭಿತೋವರ್ತತೇ) - 'ಶಕ್ನೋತೀಹೈವ'ದಲ್ಲಿ ಹೇಳಿದಂತೆ ಕಾಮಕ್ರೋಧ ಜಯಿಸಿದವರು ; 'ನಪ್ರಹೃಷ್ಯೇತ್' ಮತ್ತು 'ಬಾಹ್ಯಸ್ಪರ್ಶೇಷು'ಗಳಲ್ಲಿ ಹೇಳಿದಂತೆ ಯತ್ನಶೀಲರಾದವರು; 'ಯೋನ್ತಃ ಸುಖಃ'ದಲ್ಲಿ ಹೇಳಿದಂತೆ ಆತ್ಮದಲ್ಲೇ ಕಟ್ಟುಬಿದ್ದಿರುವ ಮನಸ್ಸುಳ್ಳವರು; 'ಯೇ ಹಿಸಂಸ್ಪರ್ಶಜಾ' ದಲ್ಲಿ ಹೇಳಿದಂತೆ ಪ್ರಾಕೃತದಲ್ಲಿ ದೋಷ ಕಂಡು ಸಹಜ ಮನೋಜಯ ಹೊಂದಿದವರು ; ಇಂತಹವರಿಗೆ ಬ್ರಹ್ಮಾನಂದವು ಕೈಗೆಟುಕುತ್ತಿರುತ್ತದೆ ॥೨೬॥

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್, ಚಕ್ಷುಶ್ಚೈವಾನ್ತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರ ಚಾರಿಣೌ ॥೨೭॥**

**ಯತೇನ್ದ್ರಿಯ ಮನೋಬುದ್ಧಿರ್ ಮುನಿರ್ಮೋಕ್ಷ ಪರಾಯಣಃ ।**
**ವಿಗತೇಚ್ಛಾಭಯಕ್ರೋಧಃ ಯಸ್ಸದಾ ಮುಕ್ತ ಏವ ಸಃ ॥೨೮॥**

(ಬಾಹ್ಯಾನ್ ಸ್ಪರ್ಶಾನ್ ಬಹಿಃ ಕೃತ್ವಾ ; ಚಕ್ಷುಃ ಭ್ರುವೋಃ ಅನ್ತರೇ ಕೃತ್ವಾ ; ನಾಸಾಭ್ಯನ್ತರ ಚಾರಿಣೌ ಪ್ರಾಣಾಪಾನೌ ಸಮೌಕೃತ್ವಾ ; ಯತ, ಇನ್ದ್ರಿಯ-ಮನೋ-ಬುದ್ಧಿಃ ; ವಿಗತ-ಇಚ್ಛಾ- ಭಯ ಕ್ರೋಧಃ ; ಮೋಕ್ಷ ಪರಾಯಣಃ ; ಮುನಿಃ ಯಃ; ಸಃ ಸದಾ ಮುಕ್ತಃ ಏವ) - ಬಾಹ್ಯ ವಿಷಯ ಸಂಪರ್ಕಗಳನ್ನು ಮನಸ್ಸಿನಿಂದ ಹೊರಗಿಟ್ಟು ; (ಯೋಗಾಭ್ಯಾಸಯೋಗ್ಯವಾದ ಆಸನದಲ್ಲಿ ನೆಟ್ಟಗೆ ಕುಳಿತು) ಕಣ್ಣನ್ನು ಹುಬ್ಬುಗಳ ಮಧ್ಯೆ (ಮೂಗಿನ ತುದಿಯಲ್ಲಿ) ಇಟ್ಟು ; ಮೂಗಿನ ಹೊಳ್ಳೆಗಳಲ್ಲಿ ಸಂಚರಿಸುವ ಉಚ್ಛ್ವಾಸ ನಿಶ್ವಾಸಗಳನ್ನು ಸಮಗತಿವುಳ್ಳವುಗಳನ್ನಾಗಿ ಮಾಡಿ ; ಆತ್ಮೇತರ ವಿಷಯದಲ್ಲಿ ಇಂದ್ರಿಯ ಮನಸ್ಸು, ಬುದ್ಧಿಗಳು ಪ್ರವರ್ತಿಸದಂತೆ ನಿಯಮಿಸಿ ; (ಆದ್ದರಿಂದಲೇ) ಇಚ್ಛೆ-ಭಯ-ಕ್ರೋಧವಿಲ್ಲದವನಾಗಿ ; ಮೋಕ್ಷವೊಂದೇ ಪರಮ ಪ್ರಯೋಜನವೆಂದು ಅರಿತವನಾಗಿ ; ಆತ್ಮಮನನಶೀಲನಾದ ಯಾವಾತನುಂಟೋ; ಅವನು ಸಾಧ್ಯದಶೆಯಲ್ಲಿ ಹೇಗೋ ಹಾಗೆ ಸಾಧನ ದಶೆಯಲ್ಲೂ ಮುಕ್ತನೇ ॥೨೮॥

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕ ಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾಮಾಂ ಶಾನ್ತಿಮೃಚ್ಛತಿ ॥೨೯॥**

(ಮಾಂ ಯಜ್ಞತಪಸಾಂ ಭೋಕ್ತಾರಂ, ಸರ್ವಲೋಕ ಮಹೇಶ್ವರಂ, ಸರ್ವಭೂತಾನಾಂ ಸುಹೃದಂ, ಜ್ಞಾತ್ವಾ ಶಾನ್ತಿಮ್ ಋಚ್ಛತಿ .) ನನ್ನನ್ನು ಎಲ್ಲ ಯಜ್ಞತಪಸ್ಸುಗಳ ಆರಾಧ್ಯನನ್ನಾಗಿ, ಸಕಲ-ಲೋಕೇಶ್ವರರಿಗೂ - ಈಶ್ವರನನ್ನಾಗಿ, ಎಲ್ಲ ಜೀವಿಗಳಿಗೂ ಸುಹೃತ್ತನ್ನಾಗಿ (ಸ್ನೇಹಿತನನ್ನಾಗಿ) ತಿಳಿದರೆ (ಕರ್ಮಯೋಗ ಯಜ್ಞಾನುಷ್ಠಾನದಲ್ಲೇ) ಸುಖವನ್ನು ಕಾಣುತ್ತಾನೆ ॥೨೯॥

**ಇತಿ ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ "ಕರ್ಮಸಂನ್ಯಾಸಯೋಗೋ ನಾಮ ಪಞ್ಚಮೋಽಧ್ಯಾಯಃ ॥**



॥ ಶ್ರೀಃ ॥
॥ ಶ್ರೀಮತೇ ರಾಮಾನುಜಾಯ ನಮಃ ॥

# ಅಥ ಷಷ್ಠಾಧ್ಯಾಯಃ ॥ ೪೭ ಶ್ಲೋ ॥

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನನಿರಗ್ನಿರ್ನಚಾಕ್ರಿಯಃ ॥೧॥**

(ಕರ್ಮಫಲಮ್ ಅನಾಶ್ರಿತಃ; ಕರ್ಮ, 'ಕಾರ್ಯಮ್!' ಇತಿ ಯಃ ಕರೋತಿ, ಸಃ ಸಂನ್ಯಾಸೀ ಚ ಯೋಗೀ ಚ , ನಿರಗ್ನಿಃ ; ನಚ ಅಕ್ರಿಯ ಃ) - ಶಾಸ್ತ್ರೀಯ ಕರ್ಮಗಳ ಫಲವನ್ನವಲಂಬಿಸದೆ ; ಆ ಕರ್ಮಗಳನ್ನು, 'ಸರ್ವಲೋಕ ಮಹೇಶ್ವರನಾಗಿದ್ದರೂ ನನ್ನ ಸುಹೃತ್ತೂ ಆಗಿರುವ ಭಗವಂತನ ಆಜ್ಞೆಯಾದ ಇದನ್ನು ನಾನು ಮಾಡಲೇಬೇಕು ಇದು ನನ್ನ ಜೀವನದ ಭಾಗ್ಯ !' ಎಂಬ ಹಾರ್ದಭಾವದಿಂದ ಯಾವಾತನು ಆಚರಣೆ ಮಾಡುತ್ತಾನೋ ಅವನು ಜ್ಞಾನಯೋಗಿಯೂ ಹೌದು, ಕರ್ಮಯೋಗ ರಹಸ್ಯಜ್ಞನೂ ಹೌದು, ಆವನು ಸಂನ್ಯಾಸಾಶ್ರಮಿಯಂತೆ, ಅಗ್ನಿಸಂಪರ್ಕ ರಹಿತನಲ್ಲ ; ದ್ರವ್ಯಾರ್ಜನಾದಿ ಕ್ರಿಯಾಕಲಾಪ ಬಿಟ್ಟವನೂ ಅಲ್ಲ ॥೧॥

**ಯಂ ಸಂನ್ಯಾಸ ಇತಿ ಪ್ರಾಹುಃ ಯೋಗಂ ತಂ ವಿದ್ಧಿ ಪಾಣ್ಡವ !**
**ನ ಹ್ಯಸಂನ್ಯಸ್ತಸಙ್ಕಲ್ಪೋ ಯೋಗೀ ಭವತಿ ಕಶ್ಚನ ॥೨॥**

(ಯಂ ಸಂನ್ಯಾಸಃ ಇತಿ ಪ್ರಾಹುಃ ತಂ ಯೋಗಂ ವಿದ್ಧಿ ಪಾಣ್ಡವ !) - ಯಾವುದನ್ನು ಜ್ಞಾನನಿಷ್ಠೆ ಎಂದು

ಹೇಳುತ್ತಾರೆಯೋ, ಅದನ್ನು ಕರ್ಮಯೋಗವೆಂದೇ ತಿಳಿ, ಪಾಣ್ಡವನೇ! ।; - (ಹಿ, ಅಸಂನ್ಯಸ್ತಸಙ್ಕಲ್ಪಃ ಕಶ್ಚನ, ಯೋಗೀನ ಭವತಿ) - ಏಕೆಂದರೆ ದೇಹತಾನೆಂಬ ಭ್ರಮೆಯನ್ನು ತ್ಯಾಗ ಮಾಡದ ಯಾವಾತನೇ ಆಗಲೀ, ಕರ್ಮಯೋಗಿ ಯಾಗಲಾರ ।೨॥

**ಆರುರುಕ್ಷೋರ್ ಮುನೇರ್ ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥**

(ಯೋಗಂ, ಆರುರಕ್ಷೋಃ, ಮುನೇಃ; ಕರ್ಮಕಾರಣಮ್ ಉಚ್ಯತೇ ।) - ಆತ್ಮಸ್ವರೂಪ-ಮತ್ತು -ಮನಸ್ಸಿನ ದೃಷ್ಟಿ ಇವುಗಳ ಪರಸ್ಪರ ಸಾಕ್ಷಾತ್ ಸಂಬಂಧವನ್ನು ಪಡೆಯಲಿಚ್ಛಿಸುವ, ಆತ್ಮ ಮನನಶೀಲನಿಗೆ ; ಕರ್ಮಯೋಗವೇ ಧ್ಯೇಯದ ಕಡೆಗೆ ಚಲಿಸಲು ಕಾರಣವೆಂದು ಹೇಳಲ್ಪಡುತ್ತದೆ ।; - ತಸ್ಯಏವ ಯೋಗಾರೂಢಸ್ಯ ; ಶಮಃ ಕಾರಣ ಮುಚ್ಯತೇ । - ಅವನೇ 'ಯೋಗ' ಸ್ಥಿತಿಗೆ ಆರೂಢನಾದ ಮೇಲೆ ; ಕರ್ಮನಿವೃತ್ತಿಯು ಸಾಕ್ಷಾತ್ಕಾರದ ಕಡೆಗೆ ಮುಂದುವರಿಯಲು ಕಾರಣವೆಂದು ಹೇಳಲ್ಪಡುತ್ತದೆ. ('ಯೋಗಾರೂಢನೆಂದರೆ ಆತ್ಮಸಾಕ್ಷಾತ್ಕಾರ ಸ್ಥಿತಿಯುಳ್ಳವನಲ್ಲ ; ಸಹಜವಾಗಿಯೇ ಆತ್ಮ ಬಿಟ್ಟು ಬೇರೆಯದರಲ್ಲಿ ಮನಸ್ಸು ಪ್ರವಹಿಸದ ಸ್ಥಿತಿಯುಳ್ಳವನು)

**ಯದಾಹಿ ನೇನ್ದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಙ್ಕಲ್ಪ ಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥೪॥**

(ಯದಾ ಇನ್ದ್ರಿಯಾರ್ಥೇಷು ನಾನುಷಜ್ಜತೇ, ಕರ್ಮಸು ಚ ನಾನು ಷಜ್ಜತೇ) ಯಾವಾಗ ಇಂದ್ರಿಯ

ವಿಷಯಗಳಲ್ಲಿ ಸಂಗಬೇಕೆನಿಸದವನಾಗುತ್ತಾನೋ, ಅವುಗಳನ್ನು ಪಡೆಯುವ ಪ್ರಯತ್ನಗಳಲ್ಲೂ ಮನಸ್ಸಿಲ್ಲದವನಾಗುತ್ತಾನೋ, (ತದಾಹಿ) ಆಗಮಾತ್ರ (ಸರ್ವಸಙ್ಕಲ್ಪ ಸಂನ್ಯಾಸೀ) ಎಲ್ಲ ಪ್ರಾಕೃತ ಸಂಕಲ್ಪ ಬಿಟ್ಟವನಾಗಿ, "ಯೋಗಾರೂಢಃ" ಎಂದು ಎನಿಸುತ್ತಾನೆ. ॥

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವಹ್ಯಾತ್ಮನೋ ಬನ್ಧುಃ ಆತ್ಮೈವ ರಿಪುರಾತ್ಮನಃ ॥೫॥**

(ಆತ್ಮನಾ ಆತ್ಮಾನಮ್ ಉದ್ಧರೇತ್) ತನ್ನ ಮನಸ್ಸಿಂದ ತನ್ನನ್ನು ಅಮೃತತತ್ತ್ವಕ್ಕೆ ಏರುವಂತೆ ಮಾಡಿಕೊಳ್ಳಬೇಕು । ; - (ಆತ್ಮಾನಂ ನಾವಸಾದಯೇತ್) ತನ್ನನ್ನು ಅವಸಾನಗೊಳಿಸಿಕೊಳ್ಳಬಾರದು ।(ಹಿ, ಆತ್ಮಾ ಏವ, ಆತ್ಮನೋ ಬನ್ಧುಃ) - ಏಕೆಂದರೆ, ತನ್ನಮನಸ್ಸೇ, ತನಗೆ ಬನ್ಧು । - (ಆತ್ಮಾ ಏವ ರಿಪುಃ ಆತ್ಮನಃ) - ತನ್ನಮನಸ್ಸೇ ಶತ್ರು ತನಗೆ ।

(ಇಂದ್ರಿಯ ವಿಷಯದಲ್ಲಿ ಮುಳುಗಿದ ಮನಸ್ಸು ಶತ್ರು ; ಆತ್ಮನಲ್ಲಿ ಮುಳುಗಿದ ಮನಸ್ಸು ಬನ್ಧು)

**ಬನ್ಧುರಾತ್ಮಾತ್ಮನಃಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥**

(ಯೇನ ಆತ್ಮಾ ಆತ್ಮನಾ ಏವ ಜಿತಃ ; ತಸ್ಯ ಆತ್ಮನಃ ಆತ್ಮಾ ಬನ್ಧುಃ) ಯಾವಾತನ ಮನಸ್ಸು ತನ್ನಿಂದಲೇ ಜಯಿಸಲ್ಪಟ್ಟಿದೆಯೋ : ಆತನಿಗೆ ತನ್ನ ಮನಸ್ಸು ಬನ್ಧು । - (ಅನಾತ್ಮನಃ ತು, ಆತ್ಮೈವ ಶತ್ರುವತ್, ಶತ್ರುತ್ವೇ, ವರ್ತೇತ । - ಮನನೋಜಯವಿಲ್ಲದವನಿಗಾದರೋ, ಮನಸ್ಸೇ ಶತ್ರುವಿನಂತೆ, ಶ್ರೇಯೋವಿರೋಧಿ ಕೃತ್ಯದಲ್ಲಿ, ತೊಡಗುವುದು ಖಂಡಿತ ।

**ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾಮಾನಾವಮಾನಯೋಃ ॥೭॥**

ಶೀತೋಷ್ಣ ಇತ್ಯಾದಿ ಸುಖದುಃಖದ್ವನ್ದ್ವಗಳಲ್ಲಿಯೂ ಮಾನಾವಮಾನ ಸಂದರ್ಭಗಳಲ್ಲಿಯೂ, (ಜಿತಾತ್ಮನಃ) ಮನೋವಿಕಾರ ಜಯಿಸಿದವನಾಗಿ(ಪ್ರಶಾನ್ತಸ್ಯ) ನಿರ್ಮಲಚಿತ್ತನಾದವನಿಗೆ(ಆತ್ಮಾ ಪರಂ ಸಮಾಹಿತಃ) ಶುದ್ಧಾತ್ಮಸ್ವರೂಪವು ಬಹಳ ಚೆನ್ನಾಗಿ ಧರಿಸಲ್ಪಟ್ಟಿರುತ್ತದೆ (ಮನದಲ್ಲಿ)। (ಕರ್ಮಯೋಗಿಯ ಮನಸ್ಸು ವಿಷಯರುಚಿ ಗೆಲ್ಲಲು ಪ್ರಾರಂಭಿಸುವುದು ಸ್ಪರ್ಶಜನ್ಯ ಸುಖದುಃಖಗಳನ್ನೂ ಮನೋಜನ್ಯ ಸುಖದುಃಖಗಳನ್ನೂ ಸಹಿಸಿಕೊಳ್ಳುವ ಈ ಹಂತದಿಂದ) ॥೭॥

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಞ್ಚನಃ ॥೮॥**

(ಜ್ಞಾನ) ಆತ್ಮಸ್ವರೂಪಜ್ಞಾನದಿಂದಲೂ (ವಿಜ್ಞಾನ) ಆತ್ಮನಿಗೆ ಪ್ರಕೃತಿಗಿಂತ ಇರುವ ವಿಶೇಷಗಳ ಜ್ಞಾನದಿಂದಲೂ (ತೃಪ್ತಾತ್ಮಾ) ಸಂತುಷ್ಟಚಿತ್ತನಾಗಿ (ಕೂಟಸ್ಥಃ) ಜ್ಞಾನಮಯಾಕಾರವಾಗಿ ಸಮಾನವಾಗಿರುವ ಆತ್ಮಗಳ ವರ್ಗಕ್ಕೆ ತಾನು ಸೇರಿದ್ದೇನೆ ಎಂದು ತತ್ತ್ವರಸವನ್ನು ಅನುಭವಿಸುವವನಾಗಿ (ವಿಜಿತೇನ್ದ್ರಿಯಃ) ಆದ್ದರಿಂದಲೇ ವಿಶೇಷವಾಗಿ ಸ್ವವಶದಲ್ಲಿರುವ ಇನ್ದ್ರಿಯಗಳುಳ್ಳವನಾಗಿ (ಸಮಲೋಷ್ಟಾಶ್ಮಕಾಞ್ಚನಃ) ಮಣ್ಣುಹೆಂಟೆ - ಕಲ್ಲುಚೂರು - ಚಿನ್ನದ ತುಂಡು - ಇವುಗಳಲ್ಲಿ

ಯಾವ ರೀತಿಯ ಪ್ರಯೋಜನ ವ್ಯತ್ಯಾಸವನ್ನು ಕಾಣದವನಾಗಿ ಇರುವ (ಯೋಗೀ) ಕರ್ಮಯೋಗಿಯು ("ಯುಕ್ತಃ" ಇತಿ ಉಚ್ಯತೇ) ಆತ್ಮಾವಲೋಕನ ರೂಪಯೋಗದ ಅಭ್ಯಾಸಕ್ಕೆ 'ಯೋಗ್ಯನು' ಎನಿಸುತ್ತಾನೆ ॥೮॥

**ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥ ದ್ವೇಷ್ಯ ಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ ವಿಶಿಷ್ಯತೇ ॥೯॥**

ಸುಹೃತ್*ಮಿತ್ರ*ಅರಿ*ಉದಾಸೀನ*ಮಧ್ಯಸ್ಥ*ಸಹಜದ್ವೇಷಿ*ಬಂಧು*ಪಾಪಿ ಇವರೆಲ್ಲರಲ್ಲೂ ಸಮಬುದ್ಧಿ ಉಳ್ಳವನು । ಯೋಗಾಭ್ಯಾಸಕ್ಕೆ ವಿಶೇಷವಾಗಿ ಯೋಗ್ಯನು । (ಈ ೯ ಶ್ಲೋಕಗಳಿಂದ, ಹಿಂದೆಯೇ ಹೇಳಿದ್ದ 'ಕರ್ಮಯೋಗ'ದ ಲಕ್ಷಣಗಳನ್ನೇ, 'ಕರ್ಮಯೋಗಿಯ ಗುಣ ವಿಶೇಷಗಳು ಎಂಬುದಾಗಿ ಒಂದು ಹೊಸ ವೈಖರಿಯಲ್ಲಿ ಏರುವ ಕ್ರಮದಲ್ಲಿ ಹಂತಹಂತವಾಗಿ ಶ್ರೀಭಗವಂತನು ವರ್ಣಿಸಿರುವುದಲ್ಲದೆ, ಕರ್ಮಯೋಗಿಯು ಜ್ಞಾನಯೋಗಿಯೇ ಆಗಿದ್ದಾನೆ ಎಂಬುದನ್ನೂ ತೋರಿಸಿದ್ದಾನೆ) ॥

(ಸುಹೃತ್=ವಯಸ್ಸು ಯಾವುದೇ ಇರಲಿ ತನಗೆ ಹಿತಬಯಸುವವನು । ಮಿತ್ರ=ಒಂದೇ ವಯಸ್ಸಿನ ಹಿತೈಷಿ। ಅರಿ=ಕಾರಣವಿರುವುದರಿಂದ ತನಗೆ ಅಹಿತ ಬಯಸುವವನು । ಉದಾಸೀನ =ಕಾರಣವಿಲ್ಲದ್ದರಿಂದ ಹಿತ-ಅಹಿತ-ಯಾವುದನ್ನೂ ಬಯಸದವನು। ಮಧ್ಯಸ್ಥ=ಜನ್ಮತಃ ಹಿತೈಷಿ । ಸಾಧು=ಧರ್ಮ ಶೀಲರು । ಪಾಪಿ= ಅಧರ್ಮ ಶೀಲರು ॥ 'ಆತ್ಮ' ವೊಂದರಿಂದಲೇ ಸಾರ್ಥಕ್ಯ ಪಡೆಯಲು ಹೊರಟವನಿಗೆ

ಇವರಾರಿಂದಲೂ ಪ್ರಯೋಜನವಿಲ್ಲವಾದ್ದರಿಂದ, ಹಾಗೂ ವಿರೋಧವಿಲ್ಲವಾದ್ದರಿಂದ, ಇವರೆಲ್ಲರೂ ಇವನ ದೃಷ್ಟಿಯಲ್ಲಿ ಸಮಾನರೇ। 'ಯೋಗದ'ದ ಅಭ್ಯಾಸಕ್ಕೆ ವಿಶೇಷ ಅರ್ಹನು ಇವನು॥) ॥೯॥

**ಯೋಗೀ ಯುಞ್ಜೀತ ಸತತಮ್ ಆತ್ಮಾನಂ ರಹಸಿ ಸ್ಥಿತಃ।**
**ಏಕಾಕೀ ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ॥೧೦॥**

(ಈ ಶ್ಲೋಕದಿಂದ 'ಯೋಗಾಭ್ಯಾಸ'' ಕ್ರಮದ ಉಪದೇಶ ಪ್ರಾರಂಭ)

(ಯೋಗೀ: ಸತತಂ, ರಹಸಿಸ್ಥಿತಃ, ಏಕಾಕೀ; ಯತ-ಚಿತ್ತ-ಆತ್ಮಾ; ನೀರಾಶೀಃ; ಅಪರಿಗ್ರಹಃ, ಆತ್ಮಾನಂ ಯುಞ್ಜೀತ।)-ಮೇಲೆ ವರ್ಣಿತನಾದ ಕರ್ಮಯೋಗ ಸಿದ್ಧನು;ಪ್ರತಿದಿನವೂ ಸಕಾಲದಲ್ಲಿ, ನಿರ್ಜನ-ನಿಶ್ಶಬ್ದ ಸ್ಥಳದಲ್ಲಿ ಇದ್ದು,ಎರಡನೆಯವ ವ್ಯಕ್ತಿ ಇಲ್ಲದವನಾಗಿ ; ಆತ್ಮವಶ ಪಡಿಸಲ್ಪಟ್ಟ -ಚಿಂತನರಹಿತ-ಮನಸ್ಕನಾಗಿ; ಸುಪ್ತವಾದ ಆಶೆಯೂ ಇಲ್ಲದವನಾಗಿ ; ಯಾವ ಮಮತೆಯೂ ಇಲ್ಲದವನಾಗಿ; ತನ್ನನ್ನು ಯೋಗಾಭ್ಯಾಸದಲ್ಲಿ ತೊಡಗಿಸಿಕೊಳ್ಳಬೇಕು ॥ ಅದು ಹೇಗೆಂದರೆ-

**ಶುಚೌದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಮ್ ॥೧೧॥**
**ತತ್ರೈಕಾಗ್ರಂ ಮನಃಕೃತ್ವಾ ಯತಚಿತ್ತೇನ್ದ್ರಿಯಕ್ರಿಯಃ।**
**ಉಪವಿಶ್ಯಾಸನೇ ಯುಞ್ಜ್ಯಾತ್ ಯೋಗಮಾತ್ಮವಿಶುದ್ಧಯೇ ॥೧೨॥**

(ಶುಚಾದೇಶೇ) ಪಾಷಂಡಿ - ಪತಿತಾದಿಗಳ ಸಂಬಂಧ ಅಶುಚಿವಸ್ತುಗಳ ಸಂಬಂಧ ಇಲ್ಲದಿರುವ,

ಪವಿತ್ರತೆಯೂ ಉಳ್ಳ ಸ್ಥಳದಲ್ಲಿ (ನಾತ್ಯುಚ್ಛ್ರಿತಂ ನಾತಿನೀಚಂ) ಅತಿ ಎತ್ತರವಾಗಲಿ ಅತಿತಗ್ಗಾಗಲಿ ಅಲ್ಲದಿರುವ (ಚೇಲ-ಅಜಿನ-ಕುಶ-ಉತ್ತರಮ್) ಬಟ್ಟೆಯ ಮೇಲೆ ಕೃಷ್ಣಾಜಿನದ ಮೇಲೆ ದರ್ಭೆ ಹಾಕಿರುವ (ಆತ್ಮನಃ ಸ್ಥಿರಮ್ ಆಸನಂ ಪ್ರತಿಷ್ಠಾಪ್ಯ) ತನ್ನ ಸ್ಥಿರವಾದ ಪೀಠವನ್ನು ದೃಢವಾಗಿ ಸ್ಥಾಪಿಸಿ (ತತ್ರ ಆಸನೇ ಉಪವಿಶ್ಯ) ಆ ಪೀಠದಲ್ಲಿ ಕುಳಿತು (ಬೆನ್ನೊರಗಿ ಕೊಳ್ಳುವ ಗೋಡೆ/ಮಣೆ ಭದ್ರವಾಗಿರುವ, ಮನಃ ಪ್ರಸನ್ನತೆ ಉಂಟು ಮಾಡುವ, ಆಸನದಲ್ಲಿ ಕುಳಿತು) ( ಏಕಾಗ್ರಂ ಮನಃ ಕೃತ್ವಾ) ಆತ್ಮೈಕಾಗ್ರವಾದ ಮನಸ್ಸನ್ನು ಮಾಡಿಕೊಂಡು (ಯತ-ಚಿತ್ತ-ಇನ್ದ್ರಿಯ-ಕ್ರಿಯಃ) ಬಾಹ್ಯ ಚಿಂತನೆಗಳನ್ನೂ ಬಾಹ್ಯೇಂದ್ರಿಯಗಳನ್ನೂ ನಿಯಮಿಸಿ (ಆತ್ಮವಿಶುದ್ಧಯೇ) ಕರ್ಮ ಬಂಧನಿವೃತ್ತಿಯೆಂಬ ಪರಿಶುದ್ಧಿಗಾಗಿ (ಇದೇ ಪ್ರಥಮ ಮೋಕ್ಷ, ಇದಕ್ಕಾಗಿ) ಯೋಗಂ ಯುಞ್ಜ್ಯಾತ್) ಆತ್ಮದರ್ಶನಯೋಗಾಭ್ಯಾಸದಲ್ಲಿ ನಿರತನಾಗಬೇಕು ॥೧೨॥

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥**

**ಪ್ರಶಾಂತಾತ್ಮಾ ವಿಗತಭೀಃ ಬ್ರಹ್ಮಚಾರಿವ್ರತೇಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥**

(ಕಾಯ-ಶಿರೋ-ಗ್ರೀವಂ, ಸಮಂ, ಅಚಲಂ, ಧಾರಯನ್; ದಿಶಶ್ಚ ಅನವಲೋಕಯನ್, ಸ್ವಂನಾಸಿಕಾಗ್ರಂ

ಸಂಪ್ರೇಕ್ಷ್ಯ, ಪ್ರಶಾಂತಾತ್ಮಾ; ವಿಗತಭೀಃ ಬ್ರಹ್ಮಚಾರಿವ್ರತೇ ಸ್ಥಿತಃ ; ಮನಃ ಸಂಯಮ್ಯ ಮಚ್ಚಿತ್ತಃ ; ಯುಕ್ತಃ ಮತ್ಪರಃ ; ಆಸೀತ ॥೧೪॥ - ಬೆನ್ನು-ಕುತ್ತಿಗೆ-ಶಿರಸ್ಸುಗಳನ್ನು ಲಂಬವಾಗಿ, ಅಲುಗಾಡದೆ ಸ್ಥಿರವಾಗಿ (ಒರಗಲು ಅವಲಂಬನೆಯ ಸಹಾಯದಿಂದ), ಧರಿಸಿ ; ದಿಕ್ಕುಗಳನ್ನೂ ನೋಡದೆ, ತನ್ನ ಮೂಗಿನ ತುದಿಯನ್ನು ಚೆನ್ನಾಗಿ ನೋಡುತ್ತಾ, ಅತ್ಯಂತ ನೆಮ್ಮದಿಯಾದ ಮನಸ್ಸುಳ್ಳವನಾಗಿ ; ಭಯರಹಿತನಾಗಿ; ಬ್ರಹ್ಮಚರ್ಯಯುಕ್ತನಾಗಿ; ಮನಸ್ಸನ್ನು ಸಂಯಮಿಸಿ; ದಿವ್ಯಮಂಗಳಮೂರ್ತಿಯಾದ ನನ್ನನ್ನು ಚಿನ್ತನೆ ಮಾಡುತ್ತಾ ; ಅವಧಾನಯುಕ್ತನಾಗಿ ನನ್ನನ್ನೇ ಚಿನ್ತನೆ ಮಾಡುತ್ತಾ ; (ಅವಧಾನಯುಕ್ತನಾಗಿ; ನನ್ನನ್ನೇ ತನ್ನ ಮಾನಸಿಕ ವಿಷಯವಾಗಿಟ್ಟು ಕೊಂಡು);ಕುಳಿತಿರಬೇಕು ॥೧೪॥

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾನ್ತಿಂ ನಿರ್ವಾಣ ಪರಮಾಂ ಮತ್ ಸಂಸ್ಥಾಮ್ ಅಧಿಗಚ್ಛತಿ ॥೧೫॥**

(ಏವಂ,ಸದಾ, ಆತ್ಮಾನಂ, ಯಞ್ಜನ್ ; ನಿಯತಮಾನಸಃ ; ಮತ್ಸಂಸ್ಥಾಂ, ನಿರ್ವಾಣ ಪರಮಾಂ, ಶಾನ್ತಿಮ್ । ಅಧಿಗಚ್ಛತಿ ।) - ಈ ರೀತಿ, ನಿತ್ಯವೂ ಯೋಗ ಕಾಲದಲ್ಲಿ, ಮನಸ್ಸನ್ನು, ಶುಭಾಶ್ರಯನಾದ ನನ್ನಲ್ಲಿ ಸೇರಿಸಿ ; ನಿಶ್ಚಲಮನಸ್ಸುಳ್ಳವನಾಗಿ ; ನನ್ನಲ್ಲಿ ಯವಾಗಲೂ ಸಮೃದ್ಧವಾಗಿರುವ, ಸುಖದ ಪರಾಕಾಷ್ಠೆಯಾಗಿರುವ, ವರ್ಣನಾತೀತವಾದ ನೆಮ್ಮದಿಯನ್ನು ಹೊಂದುತ್ತಾನೆ.

**ನಾತ್ಯಶ್ನತಸ್ತು ಯೋಗೋಽಸ್ತಿ ನಚೈಕಾನ್ತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋನೈವಚಾರ್ಜುನ ॥೧೬॥**
**ಯುಕ್ತಾಹಾರ ವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವ ಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥**

ನ ಅತ್ಯಶ್ನತಸ್ತು ಯೋಗೋಸ್ತಿ। - ಅತಿಯಾಗಿ ತಿನ್ನುವವನಿಗೆ ಆತ್ಮಯೋಗ ಸಾಧ್ಯವಿಲ್ಲ । ಅನಶ್ನತಶ್ಚ ಏಕಾನ್ತಂ ನಾಸ್ತಿ । - ತಿನ್ನದೆಯೇ ಇರುವವನಿಗೂ ಏಕಾನ್ತ ಮನಸ್ಸು ಸಾಧ್ಯವಿಲ್ಲ । ; ಅತಿಸ್ವಪ್ನಶೀಲಸ್ಯ ಚ ನ ।- ಅತಿಯಾಗಿ ನಿದ್ರಿಸುವವನಿಗೂ ಇಲ್ಲ । ಅರ್ಜುನ! ಜಾಗ್ರತಶ್ಚನ ॥ ಅರ್ಜುನ! ಮಲಗದೇ ಇರುವವನಿಗೂ ಇಲ್ಲ ॥ ; ಯುಕ್ತಾಹಾರವಿಹಾರಸ್ಯ - ಮಿತವಾದ ಆಹಾರ ವಿಹಾರವುಳ್ಳವನಾಗಿ, ಯಕ್ತಚೇಷ್ಟಸ್ಯ ಕರ್ಮಸು - ಕೆಲಸಗಳಲ್ಲಿ ಮಿತವಾದ ಶ್ರಮವುಳ್ಳವನಾಗಿ, ಯುಕ್ತಸ್ವಪ್ನಾವಬೋಧಸ್ಯ - ಮಿತವಾದ ನಿದ್ರೆ, ಮತ್ತು ಎಚ್ಚರ ಕಾಲಗಳನ್ನುಳ್ಳವನಾಗಿರುವವನಿಗೆ, ದುಃಖಹಾ ಯೋಗೋ ಭವತಿ ॥- ಸಕಲ ದುಃಖನಾಶಕವಾದ ಆತ್ಮಾವಲೋಕನವು ಸಿದ್ಧಿಸುತ್ತದೆ !

**ಯದಾ ವಿನಿಯತಂ ಚಿತ್ತಮ್ ಆತ್ಮನ್ಯೇವಾತಿಷ್ಠತೇ ।**
**ನಿಸ್ಸ್ಪೃಹಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇತದಾ ॥೧೮॥**

(ಯದಾ) ಯಾವಾಗ (ಚಿತ್ತಂ) ಪ್ರಯೋಜನಾಪೇಕ್ಷಿಯಾದ ಚಿತ್ತವೃತ್ತಿಯು (ಆತ್ಮನ್ಯೇವ) ಆತ್ಮನಲ್ಲೇ

(ವಿನಿಯತಂ) (ಅವತಿಷ್ಠತೇ) (ನಿರತಿಶಯ ಪ್ರಯೋಜನ ಪಡೆದು) ವಿಶೇಷ ನಿಶ್ಚಲವಾಗಿ ನಿಲ್ಲುತ್ತದೆಯೋ (ತದಾ) ಆಗ (ಸರ್ವಕಾಮೇಭ್ಯೋನಿಸ್ಪೃಹಃ) ಯಾವ ಪ್ರಾಕೃತ ಕಾಮ್ಯಗಳಲ್ಲೂ ಆಕರ್ಷಣೆಯಿಲ್ಲದವನಾಗಿ ('ಯುಕ್ತಃ' ಇತ್ಯುಚ್ಯತೇ) ಆತ್ಮದರ್ಶನ ಯೋಗ್ಯನಾದನೆಂದು ಹೇಳಲ್ಪಡುತ್ತಾನೆ ॥೧೮॥ (ಮನಸ್ಸಿಟ್ಟಿದ್ದು ಶ್ರೀಭಗವನ್ಮೂರ್ತಿಯಲ್ಲಿ ! ಅವನನುಗ್ರಹದಿಂದೀ ಆತ್ಮದರ್ಶನ ! )

**ಯಥಾ ದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಞ್ಜತೋ ಯೋಗಮಾತ್ಮನಃ ॥೧೯॥**

ನಿವಾತಸ್ಥಃದೀಪಃ ಯಥಾನೇಙ್ಗತೇ ; - ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪಜ್ವಾಲೆಯು ಹೇಗೆ ಕಂಪಿಸುವುದಿಲ್ಲವೋ ಅಚಲವಾಗಿಯೂ (ಪ್ರಭಾಮಯವಾಗಿಯೂ ಇರುತ್ತದೆಯೋ); ಯತಚಿತ್ತಸ್ಯ ಯೋಗಿನಃ ; =ಆತ್ಮಬದ್ಧ-ಆತ್ಮೇತರ ನಿವೃತ್ತಚಿತ್ತನಾದ ಕರ್ಮಯೋಗಿಯ ; ಆತ್ಮನಃ ; ಸಾ ಉಪಮಾಸ್ಮೃತಾ । - ಆತ್ಮಸ್ವರೂಪಕ್ಕೆ ; ಆ ಹೋಲಿಕೆಯು ಸ್ಮರಿಸಲ್ಪಟ್ಟಿದೆ.
(ದೀಪದಂತೆ ಆತ್ಮಾ । ದೀಪದ ಕಿರಣಗಳಂತೆ ಆತ್ಮನ ಜ್ಞಾನಪ್ರಭೆ)

**ಯತ್ರೋಪರಮತೇ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥**
**ಸುಖಮಾತ್ಯನ್ತಿಕಂಯತ್ ತತ್ ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।**
**ವೇತ್ತಿ ಯತ್ರ ನಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥**

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥
ತಂ ವಿದ್ಯಾದ್ ದುಃಖ ಸಂಯೋಗವಿಯೋಗಂ ಯೋಗಸಂಜ್ಞಿತಂ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣ ಚೇತಸಾ ॥23॥

(೧) (ಯೋಗಸೇವಯಾ, ನಿರುದ್ಧಂ, ಚಿತ್ತಂ ಯತ್ರ, ಉಪರಮತೇ) ಧ್ಯಾನಾನುಭವದ ಉದ್ದೇಶದಿಂದ, ಕಟ್ಟಿಹಾಕಲ್ಪಟ್ಟ, ಚಿತ್ತವು ಯಾವುದರಲ್ಲಿ ಅತಿಶಯಸುಖವಿದು ಎಂದು ರಮಿಸುತ್ತದೆಯೋ - (೨) (ಯತ್ರ ಚ ಆತ್ಮನಾ ಆತ್ಮಾನಂ ಪಶ್ಯನ್, ಆತ್ಮನಿ ಏವ ತುಷ್ಯತಿ); ಯಾವ ಅದರಲ್ಲೇ ಮನಸ್ಸಿನಿಂದ ಆತ್ಮಸ್ವರೂಪವನ್ನು ಕಾಣುತ್ತಾ ತನ್ನ ಸ್ವರೂಪದಲ್ಲೇ ಸಂತೋಷಾನುಭವಿಯಾಗಿರುತ್ತಾನೆಯೋ, - (೩) ಯತ್ ಅತೀನ್ದ್ರಿಯಂ, ಬುದ್ಧಿಗ್ರಾಹ್ಯಂ, ಆತ್ಯನ್ತಿಕಂ ಸುಖಂ, ತತ್, ಯತ್ರ ವೇತ್ತಿ) ಯಾವುದು ಇಂದ್ರಿಯಾತೀತವೂ, ಆತ್ಮ ಬುದ್ಧಿ ಮಾತ್ರದಿಂದಗ್ರಹಿಸಬೇಕಾದದ್ದೂ, ನಿರ್ದುಃಖವೂ ಅವಿಚ್ಛಿನ್ನವೂ ಆದ ಸುಖವೋ, ಅದನ್ನು ಯಾವ ಧ್ಯಾನ ಸಮಾಧಿಯಲ್ಲಿ ಅನುಭವಿಸುತ್ತಾನೋ ; (೪) (ಯತ್ರ ಚ ಸ್ಥಿತಃ ಅಯಂ, ತತ್ತ್ವತಃ ನ ಚಲತಿ - ಯಾವುದರಲ್ಲಿ ನೆಲೆನಿಂತವನಾಗಿ ಇವನು, ಆಸ್ಥಿತಿಯಿಂದ ವಿಚಲಿತನಾಗುವುದಿಲ್ಲವೋ (ಏಕೆಂದರೆ ಅದು ಸುಖಾತಿಶಯ) ; (ಯಂ ಲಬ್ಧ್ವಾ ಚ, ಅಪರಂ ಲಾಭಂ ಮನ್ಯತೇ ನಾಧಿಕಂ ತತಃ)- ಯಾವುದನ್ನು ಒಮ್ಮೆ ಪಡೆದ ಮೇಲೆ (ಯೋಗವಿರಾಮ ಕಾಲದಲ್ಲೂ). ಇತರ ಯಾವ ಲಾಭವನ್ನೂ, ಅದಕ್ಕಿಂತ ಅಧಿಕವಾಗಿ ಕಾಣುವುದಿಲ್ಲವೋ ; (೬) (ಯಸ್ಮಿನ್ ಸ್ಥಿತಃ ಅಪಿ,

ಗುರುಣಾ ದುಃಖೇನಾಪಿ, ನ ವಿಚಾಲ್ಯತೇ) - ಯಾವುದರಲ್ಲಿ ಇದ್ದಾಗಲೂ (ಅದರಿಂದ ಹೊರಗೆ ಬಂದಾಗಲೂ) ಕೂಡ, (ಗುಣವತ್ ಪುತ್ರವಿಯೋಗ ಮುಂತಾದ) ಗುರುತರ ದುಃಖದಿಂದಲೂ ವಿಚಲಿತನಾಗುವುದಿಲ್ಲವೋ; (ತಂದುಃಖಸಯೋಗ-ವಿಯೋಗಂ 'ಯೋಗ' ಸಂಜ್ಞಿತಂ ವಿದ್ಯಾತ್) - ಆ ದುಃಖ ಸಂಬಂಧದ ಪೂರ್ಣ ವಿರುದ್ಧ ಸ್ಥಿತಿಯನ್ನು ಕೇವಲ ಸುಖಮಯ ಸ್ಥಿತಿಯನ್ನು, 'ಯೋಗ' ಎಂಬ ನಾಮಧೇಯವುಳ್ಳದ್ದಾಗಿ ತಿಳಿಯತಕ್ಕದ್ದು । ('ಸಃ'! (ಇತಿ) ನಿಶ್ಚಯೇನ ಅನಿರ್ವಿಣ್ಣ ಚೇತಸಾ ಯೋಗಃ ಯೋಕ್ತವ್ಯಃ) - 'ಅಂತಹುದು!' ಎಂಬುದಾಗಿ ಆರಂಭದಲ್ಲೇ ನಿಶ್ಚಯ ಬುದ್ಧಿಯಿಂದ ಹರ್ಷಗೊಂಡಿರುವ ಮನಸ್ಸುಳ್ಳವನಿಂದ 'ಯೋಗ'ವು ಆರಂಭಿಸಲ್ಪಟ್ಟು ಅಭ್ಯಸಿಸಲ್ಪಡಬೇಕು ॥೨೩॥

**ಸಙ್ಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥೨೪॥**
**ಶನೈಃ ಶನೈರುಪರಮೇದ್ ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥೨೫॥**

(ಸಂಕಲ್ಪಪ್ರಭವಾನ್ ಸರ್ವಾನ್ ಕಾಮಾನ್ ಮನಸೈವ ತ್ಯಕ್ತ್ವಾ) ಸಂಕಲ್ಪಜನ್ಯವಾದ ಪುತ್ರಕ್ಷೇತ್ರಾದಿ ಎಲ್ಲ ಕಾಮನೆಗಳನ್ನೂ ಮನಸ್ಸಿನಿಂದಲೇ ತ್ಯಜಿಸಿ (ಅದು ಹೇಗೆಂದರೆ-ಇವುಗಳ ಸಂಬಂಧ ನನ್ನ ಸ್ವರೂಪದಿಂದ ಅಲ್ಲ, ಕರ್ಮದಿಂದ ಮಾತ್ರ, ಎಂದು ತಿಳಿದು ನಿರ್ಲಿಪ್ತನಾಗಿದ್ದು ಕೊಂಡು) (ಅಶೇಷತಃತ್ಯಕ್ತ್ವಾ) ಸಂಕಲ್ಪಜನ್ಯವಲ್ಲದ ಕಾಮಗಳನ್ನು ಪೂರ್ಣ ತ್ಯಜಿಸಿ (ಎಂದರೆ ಊಟ ಮಾತು ಇತ್ಯಾದಿಗಳಿಂದುಂಟಾಗುವ

ಹರ್ಷ-ಶೋಕಾದಿ ಉದ್ವೇಗಗಳನ್ನು ತ್ಯಜಿಸಿ (ಸಮನ್ತತಃ ಇನ್ದ್ರಿಯಗ್ರಾಮಂ ವಿನಿಯಮ್ಯ) ಎಲ್ಲ ವಿಷಯಗಳ ದೆಸೆಯಿಂದಲೂ ಇಂದ್ರಿಯಗಳನ್ನು ಮನಸ್ಸಿನಿಂದ ಹಿಂತೆಗೆದುಕೊಂಡು ॥೨೪॥ (ಶನೈಃ ಶನೈಃ ಧೃತಿಗೃಹೀತಯಾ ಬುದ್ಧ್ಯಾ, ಉಪರಮೇತ್) ಮೆಲ್ಲಮೆಲ್ಲಗೆ ಧೃತಿಯಿಂದ ಹಿಡಿಯಲ್ಪಟ್ಟ ಬುದ್ಧಿಯಿಂದ (ಎಂದರೆ ವಿವೇಕಶೀಲವಾದ ಬುದ್ಧಿಯಿಂದ) ಆತ್ಮೇತರ ಎಲ್ಲ ವಿಷಯಗಳ ದೆಸೆಯಿಂದಲೂ ನಿವೃತ್ತನಾಗಬೇಕು । (ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್) ಆತ್ಮದಲ್ಲೇ ಇರುವಂತೆ ಮನಸ್ಸನ್ನು ಮಾಡಿ ಮತ್ತೇನನ್ನೂ ಚಿಂತಿಸದಿರಬೇಕು ॥೨೫॥

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದ್ ಆತ್ಮನ್ಯೇವ ವಶಂ ನಯೇತ್ ॥೨೬॥**

(ಚಂಚಲಂ ಮನಃ ಅಸ್ಥಿರಂ ಯತಃ ಯತಃ ನಿಶ್ಚರತಿ) ಚಲಿಸುವುದೇ ಸ್ವಭಾವವಾಗಿರುವ ಅಂತಃಕರಣವು ಆತ್ಮದಲಲ್ಲಿ ನಿಲ್ಲದೆ, ಯಾವ ಯಾವ ಕಡೆ ಹೊರಕ್ಕೆಸಂಚರಿಸಹೊರಡುತ್ತದೆಯೋ (ತತಃ ತತಃ ಏತತ್ ನಿಯಮ್ಯ) ಆಯಾ ಕಡೆಯಿಂದ ಈ ಮನಸ್ಸನ್ನು ಹಿಂತಿರುಗಿಸಿ (ಆತ್ಮನ್ಯೇವ ವಶಂ ನಯೇತ್) ಆತ್ಮಸ್ವರೂಪದಲ್ಲೇ (ಅತಿಶಯ ಸುಖಸ್ಥಾನವಿದು ಎಂಬ ಭಾವನೆಯಿಂದ) ವಶೀಕರಿಸಿಕೊಳ್ಳಬೇಕು.

**ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥೨೭॥**

(ಯೋಗಿನಂ) ಯೋಗಾಭ್ಯಾಸದಿಂದ ಆತ್ಮನಿಷ್ಠಮನಸ್ಕನಾದ (ಆದ್ದರಿಂದಲೇ) (ಶಾನ್ತರಜಸಮ್)

ಪ್ರಾಚೀನದ ಕಲ್ಮಶವು ದಗ್ಧವಾಗಿರುವವನಾದ (ಆದ್ದರಿಂದಲೇ) (ಶಾನ್ತರಜಸಮ್) ರಜೋಗುಣದತೊಂದರೆಯಿಲ್ಲದವನಾದ (ಆದ್ದರಿಂದಲೇ) (ಬ್ರಹ್ಮಭೂತಮ್) ಸ್ವಸ್ವರೂಪದಿಂದ ಇರುತ್ತಿರುವವನಾದ (ಏನಂ) ಈ ಕರ್ಮಯೋಗಿಯನ್ನು (ಉತ್ತಮಂ ಸುಖಮ್ ಉಪೈತಿ) ಆತ್ಮಾನಂದದ ಉತ್ತಮ ಸುಖವು ಬಂದು ಸೇರುತ್ತದೆ । (ಹಿ!) ಏಕೆಂದರೆ ಆತ್ಮಸ್ವರೂಪವೇ ಆನಂದಮಯ! ॥೨೭॥

**ಏವಂ ಯುಞ್ಜನ್ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಂ ಅತ್ಯಂತ ಸುಖಮಶ್ನುತೇ ॥೨೮॥**

((ಏವಂ) - 'ಯೋಗೀ' ಯುಂಜೀತ ಸತತಂ) ಇತ್ಯಾದಿಯಿಂದಾರಂಭಿಸಿ ಇಲ್ಲಿಯವರೆಗೂ ಹೇಳಿದ ರೀತಿಯಲ್ಲಿ; (ಆತ್ಮಾನಂ ಸದಾಯುಞ್ಜನ್) - ತನ್ನನ್ನು ಪ್ರತಿದಿನವೂ ಯೋಗದಲ್ಲಿ ತೊಡಗಿಸಿಕೊಂಡು ; ವಿಗತಕಲ್ಮಷಃ - (ಆದರಿಂದ) ಪ್ರಾಚೀನ ಕಲ್ಮಷ ಕಳೆದುಕೊಂಡು ; (ಬ್ರಹ್ಮಸಂಸ್ಪರ್ಶಂ, ಸುಖಂ ಅತ್ಯನ್ತಂ, ಸುಖೇನ, ಸದಾ ಅಶ್ನುತೇ ) - ಬ್ರಹ್ಮಾನುಭವರೂಪ ಸುಖವನ್ನು, ಅಪರಿಮಿತವಾಗಿ, ಅನಾಯಾಸವಾಗಿ, ಯೋಗಕಾಲವಲ್ಲದಿರುವಾಗಲೂ ಯಾವಾಗಲೂ ಅನುಭವಿಸುತ್ತಿರುತ್ತಾನೆ ॥೨೮॥

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ, ಸಮದರ್ಶನಃ ॥೨೯॥**

**(ಯೋಗದಲ್ಲಿ ಪರಿಪಕ್ವದಶೆ ನಾಲ್ಕು ಸ್ತರಗಳಲ್ಲಿವೆ. ಅವು ೨೯ ರಿಂದ ೩೨ ರ ಪೂರ್ತಿ ಹೇಳಲ್ಪಡುತ್ತವೆ.)**

ಸರ್ವತ್ರ ಸಮದರ್ಶನಃ - ಎಲ್ಲ ಶುದ್ಧಾತ್ಮಗಳಲ್ಲೂ ಜ್ಞಾನಮಯಾಕಾರವಾದ ಸಮತ್ವವನ್ನು ಕಾಣುತ್ತಾ ;

Funding: Tattva Heritage Foundation,Kolkata. Digitization: eGangotri.

(ಸರ್ವಭೂತಸ್ಥಮ್ ಆತ್ಮಾನಂ - ಎಲ್ಲ ಜೀವಾತ್ಮಗಳಂತಿರುವ ತನ್ನನ್ನೂ : (ಸರ್ವಭೂತಾನಿ ಚ ಆತ್ಮನಿ) - ತನ್ನಂತಿರುವ ಎಲ್ಲ ಜೀವಾತ್ಮಗಳನ್ನೂ ; (ಯೋಗಯುಕ್ತಾತ್ಮಾ ಈಕ್ಷತೇ ।) - ಆತ್ಮಯೋಗಸಿದ್ಧನು ನೋಡಿಕೊಳ್ಳುತ್ತಿರುತ್ತಾನೆ ॥೨೯॥

**ಯೋಮಾಂ ಪಶ್ಯತಿ ಸರ್ವತ್ರ, ಸರ್ವಂಚ ಮಯಿ ಪಶ್ಯತಿ ।**
**ತಸ್ಯಾಹಂ ನಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥**

(ಅದಕ್ಕಿಂತಲೂ ಪರಿಪಕ್ವದಶೆ ಹೊಂದಿದ ಯೋಗಿಯ ವಿಷಯ ಈಗ)
(ಯಃ ಸರ್ವತ್ರ, ಮಾಂ ಪಶ್ಯತಿ) - ಯಾವಾತನು ಎಲ್ಲ ಆತ್ಮರುಗಳಲ್ಲೂ ನನ್ನ ಸಾಮ್ಯ ಕಾಣುತ್ತಾನೋ ; ಸರ್ವಂ ಚ ಮಯಿ ಪಶ್ಯತಿ) - ಎಲ್ಲ ಆತ್ಮವಸ್ತು ಸಾಮ್ಯವನ್ನು ನನ್ನಲ್ಲಿ ಕಾಣುತ್ತಾನೋ ; (ತಸ್ಯ ಅಹಂ ನ ಪ್ರಣಶ್ಯಾಮಿ ।) - ಅವನಿಗೆ ನಾನು ಕಣ್ಮರೆಯಾಗುವುದಿಲ್ಲ । (ಸ ಚಮೇ ನ ಪ್ರಣಶ್ಯತಿ ) - ನನಗೂ ಕೂಡ ಅವನು ಕಣ್ಮರೆಯಾಗುವುದಿಲ್ಲ ।
(ಪುಣ್ಯಪಾಪವಿದೂರರು ಆತ್ಮ-ಪರಮಾತ್ಮರಿಬ್ಬರೂ ಎಂಬ ಸಾಮ್ಯ)

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೩೧॥**

(ಸರ್ವಭೂತ ಸ್ಥಿತಂ ಮಾಂ )- ಎಲ್ಲ ಜೀವಾತ್ಮರ ಸಮಾನವಾಗಿರುವ ನನ್ನನ್ನು ( ಯಃ, ಏಕತ್ವಮ್, ಆಸ್ಥಿತಃ, ಭಜತೇ - ಯಾರು, ಜ್ಞಾನಮಯಸ್ವಭಾವತಯಾ ಇಬ್ಬರೂ ಒಂದೇ ರೀತಿ ದಿವ್ಯತೆಯುಳ್ಳವರೆಂದು,

ದೃಢಜ್ಞಾನಿಯಾಗಿ, ಅನುಭವಿಸುತ್ತಾನೋ ; (ಸಯೋಗೀ, ವರ್ತಮಾನೋಽಪಿ) - ಆಯೋಗಿಯು, (ಬಹಿರ್ಮುಖನಾದ ಮೇಲೆ) ಲೋಗರ ಜೊತೆ ಇರುತ್ತಿದ್ದರೂ (ಸರ್ವಥಾಮಯಿ ವರ್ತತೇ ) - ಎಲ್ಲ ರೀತಿಯಲ್ಲೂ ನನ್ನನ್ನೇ ನೋಡುತ್ತಿರುತ್ತಾನೆ. (ನನ್ನ ಸಂಗಡವೇ ವರ್ತಿಸುತ್ತಿರುತ್ತಾನೆ) ॥೩೧॥

(ಸರ್ವಜ್ಞತ್ವಾದಿ ಸ್ವಭಾವ ಸಾಮ್ಯದಿಂದ ತನ್ನಲ್ಲೂ ಎಲ್ಲ ಜೀವಾತ್ಮಗಳಲ್ಲೂ ಯಾವಾಗಲೂ ನನ್ನ ಸಾಮ್ಯವನ್ನೇ ಕಾಣುತ್ತಿರುತ್ತಾನೆ) (ಇವನು ಮೂರನೆಯ ಹಂತದ ಉತ್ತಮಯೋಗಿ)

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ! ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥೩೨॥**

(ಸರ್ವತ್ರ, ಆತ್ಮೌಪಮ್ಯೇನ, ಸುಖಂ ವಾಯದಿವಾದುಃಖಂ, ಯಃ ಸಮಂ ಪಶ್ಯತಿ - ಎಲ್ಲರಲ್ಲೂ ತನ್ನ ಸಮಾನತೆ ಇರುವುದರಿಂದ, (ಪುತ್ರಜನ್ಮಾದಿ) ಸುಖವನ್ನಾಗಲಿ (ಪುತ್ರಮರಣಾದಿ) ದುಃಖವನ್ನಾಗಲಿ, ಯಾವ ಯೋಗಿಯು ಸಮವಾಗಿ ಕಾಣುತ್ತಾನೆಯೋ (ಸಯೋಗೀ ಪರಮೋಮತಃ ) - ಆ ಯೋಗಿಯು ಅತ್ಯುತ್ತಮನೆಂದು ಪರಿಗಣಿತನು ।

(ಸ್ವಪುತ್ರ, ಜನ್ಮ ಮರಣಾದಿಕವು ಪರಪುತ್ರಜನ್ಮ ಮರಣಾದಿಸಮ, ಆದರಲ್ಲಿ ಯಾವ ಆತ್ಮ ಸ್ವರೂಪಕ್ಕೂ ಸಂಬಂಧವಿಲ್ಲದ ಕಾರಣ - ಹೀಗೆ ಯಾವಾತನಿರುತ್ತಾನೋ ಅವನು ಅತಿ ಉತ್ತಮ ಯೋಗೀ ಎಂದರ್ಥ॥)

ಅರ್ಜುನ ಉವಾಚ

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ! ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥**

**ಚಂಚಲಂ ಹಿ ಮನಃ ಕೃಷ್ಣ ! ಪ್ರಮಾಥಿ ಬಲವದ್ ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥೩೪॥**

(ಯಃ ಅಯಂ ಯೋಗಃ, ಸಾಮ್ಯೇನ, ತ್ವಯಾ ಪ್ರೋಕ್ತಃ) - ಯಾವ ಈ ಆತ್ಮಸಾಕ್ಷಾತ್ಕಾರ ಯೋಗವು, ಸರ್ವಾತ್ಮಸಾಮ್ಯ ದರ್ಶನವೆಂಬ ಲಕ್ಷಣದಿಂದ ಕೂಡಿರುವಂತಹುದು, ನಿನ್ನಿಂದ ವರ್ಣಿತವಾಯಿತೋ ; (ಮಧುಸೂದನ! ಚಂಚಲತ್ವಾತ್ ಏತಸ್ಯ ಸ್ಥಿರಾಂ ಸ್ಥಿತಿಂ ನಪಶ್ಯಾಮಿ ) - ಹೇ ಮಧುಸೂದನ! ಮನಸ್ಸಿನ ಚಂಚಲತೆಯಿಂದಾಗಿ, ಇದಕ್ಕೆ ಸ್ಥಿರವಾದ ಸ್ಥಿತಿಯನ್ನು ನಾ ಕಾಣಲಾರೆ । (ಹಿ, ಕೃಷ್ಣ! ಚಂಚಲಂ ಮನಃ, ಬಲವತ್ ಪ್ರಮಾಥಿ । ದೃಢಂ ) - ಏಕೆಂದರೆ, ಹೇ ಕೃಷ್ಣ ! ಲೌಕಿಕ ವಿಷಯಗಳಲ್ಲಿ ಎಲ್ಲೂ ಒಂದೆಡೆ ನಿಲ್ಲಿಸಲು ಅಸಾಧ್ಯವಾಗಿರುವ ಮನಸ್ಸು, (ಸಾಧಕನನ್ನು) ಬಲಾತ್ಕಾರದಿಂದ, ಅನಿತ್ಯವಸ್ತುಗಳಿಗೇ ಎಳೆಯುವಂತಹದು, ವಿರೋಧಿಸುವುದರಲ್ಲಿ ದೃಢವಾದದ್ದು । (ತಸ್ಯ) - ನನಗೆ ಪರಿಚಿತವಾದ ವಿಷಯಗಳಲ್ಲೂ ನಿಲ್ಲಿಸಲಾಗದ ಆ ಮನಸ್ಸನ್ನು ; (ನಿಗ್ರಹಂ) - ಬೇರೆ ವಿಷಯಗಳಿಂದ ಹಿಂತಿರುಗಿಸಿ ಅನಾದಿಕಾಲದಿಂದ ಅಪರಿಚಿತವಾದ ಆತ್ಮನಲ್ಲಿ ನಿಲ್ಲಿಸುವುದು ; (ವಾಯೋಃ ಇವ , ಸುದುಷ್ಕರಂ ಮನ್ಯೇ ) - ಬಿರುಗಾಳಿಯನ್ನು ಬೀಸಣಿಗೆಯಿಂದ ತಡೆಯಹೋದಂತೆ, ದುಃಸಾಧ್ಯವೆನಿಸುತ್ತದೆ ! ॥೩೪॥

ಶ್ರೀ ಭಗವಾನುವಾಚ

**ಅಸಂಶಯಮ್ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥೩೫॥**

ಸಂಶಯವಿಲ್ಲ ಮಹಾಪರಾಕ್ರಮಿಯೇ ! (ಚಲಂ ಮನಃ ದುರ್ನಿಗ್ರಹಂ) ಚಂಚಲಸ್ವಭಾವದ್ದಾದ

ಮನಸ್ಸೆಂಬುದು ನಿಗ್ರಹಿಸಲು ಕಷ್ಟ । (ತು) ಆದರೂ ಕೂಡ, (ಅಭ್ಯಾಸೇನ) ಆತ್ಮವು ದಿವ್ಯಗುಣಗಳಗಣಿ ಮತ್ತು ಜ್ಞಾನಾನಂದ ಸಾಗರ ಎಂಬ ಜ್ಞಾನದ ಅಭ್ಯಾಸದಿಂದ (ಆತ್ಮಾಭಿಮುಖ್ಯ ಉಂಟಾಗಿ) (ವೈರಾಗ್ಯೇಣಚ) ಪ್ರಾಕೃತ ವಸ್ತುಗಳೆಲ್ಲ ದೋಷಗಳ ಗಣಿ ಎಂಬ ಜ್ಞಾನದ ಅಭ್ಯಾಸದಿಂದ (ಅವುಗಳಲ್ಲಿ, ವೈಮುಖ್ಯವುಂಟಾಗಿ), (ಗೃಹ್ಯತೇ) ಹೇಗಾದರೂ ಮಾಡಿ ಹಿಡಿದು ನಿಲ್ಲಿಸಲ್ಪಡಲು ಸಾಧ್ಯ (ಅಸಾಧ್ಯವಲ್ಲ) ॥೩೫॥

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥**

(ಅಸಂಯತಾತ್ಮನಾ ಯೋಗಃ ದುಷ್ಪ್ರಾಪಃ । ಉಪಾಯತಃತು, ವಶ್ಯಾತ್ಮನಾ, ಯತತಾ) - ಮನೋಜಯವಿಲ್ಲದವನಿಂದ ಆತ್ಮಪ್ರಾಪ್ತಿಯೋಗವು ಹೊಂದಲ್ಪಡಲು ಸಾಧ್ಯವಿಲ್ಲ । ಕರ್ಮಯೋಗವೆಂಬ ಉಪಾಯದಿಂದಲಾದರೋ, ಮನೋಜಯ ಹೊಂದಿದವನು, ನಿತ್ಯವೂ ಯೋಗಾಭ್ಯಾಸ ಪ್ರಯತ್ನ ಮಾಡುತ್ತಿದ್ದರೆ ; (ಯೋಗಃ ಅವಾಪ್ತುಂಶಕ್ಯಃ, ಇತಿ ಮೇ ಮತಿಃ) - ಆತ್ಮದರ್ಶನಯೋಗವು ಹೊಂದಲ್ಪಡಲು ಶಕ್ಯ, ಎಂಬುದಾಗಿ ನನ್ನ ನಿಶ್ಚಿತಾಭಿಪ್ರಾಯ । (ಸಂಶಯ ಬೇಡ ಈ ವಿಷಯದಲ್ಲಿ - ಎಂದು ಭಾವ) ॥೩೬॥

ಅರ್ಜುನ ಉವಾಚ

**ಅಯತಿಃ ಶ್ರದ್ಧಯೋಪೇತಃ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥**

Funding: Tattva Heritage Foundation,Kolkata. Digitization: eGangotri.

**ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥**

**ಏತಂ ಮೇ ಸಂಶಯಂ ಕೃಷ್ಣ ! ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥೩೯॥**

(ಶ್ರದ್ಧಯಾ ಉಪೇತಃ, ಅಯತಿಃ, ಯೋಗಸಂಸಿದ್ಧಿವ್ ಅಪ್ರಾಪ್ಯ)- ಶ್ರದ್ಧೆಯಿಂದ ಯೋಗದಲ್ಲಿ ಪ್ರವೇಶಿಸಿ, ದೃಢಯತ್ನವಿಲ್ಲದವನಾಗಿ, ಯೋಗಸಂಸಿದ್ಧಿಯನ್ನು ಪಡೆಯದೆ (ಆತ್ಮಸಾಕ್ಷಾರ ಪಡೆಯದೆ); (ಯೋಗಾಚ್ಚಲಿತ ಮಾನಸಃ) - ಯೋಗದ ದಶೆಯಿಂದ ವಿಚಲಿತನಾದವನು (ಕಾಂ ಗತಿಂ ಗಚ್ಛತಿ ? ಕೃಷ್ಣ !) - ಯಾವ ಗತಿಯನ್ನು ಹೊಂದುವನು ? ಕೃಷ್ಣ ! ॥೩೭॥

(ಉಭಯ ವಿಭ್ರಷ್ಟಃ, ಛಿನ್ನಾಭ್ರಮಿವ, ನಶ್ಯತಿ, ಅಪ್ರತಿಷ್ಠಃ, ಬ್ರಹ್ಮಣಃ ಪಥಿವಿಮೂಢಃ, ನ ನಶ್ಯತಿ ಕಚ್ಚಿತ್?) - ಸ್ವರ್ಗಾದಿಗತಿಯಿಂದಲೂ ಬ್ರಹ್ಮಾನಂದ ಪ್ರಾಪ್ತಿಯಿಂದಲೂ ಭ್ರಷ್ಟನಾಗಿ, ಒಂದು ಮೋಡದಿಂದ ವಿಚ್ಛಿನ್ನವಾದ ತುಂಡೊಂದು ಮತ್ತೊಂದು ಅತಿ ದೊಡ್ಡ ಮೋಡವನ್ನು ಸೇರಲು ಹೋಗಿ, ಆಗದೆ, ಹೇಗೆ, ಸ್ವರೂಪನಾಶಹೊಂದಿ ಬಿಡುತ್ತದೆಯೋ ಹಾಗೆ, ಕರ್ಮಕ್ಕೆ ವೇದೋಕ್ತ ಫಲವೂ ಇಲ್ಲದೆ ಉದ್ದಿಷ್ಟ ಸಾಧನೆಯ ಸಿದ್ಧಿಯೂ ಇಲ್ಲದೆ, ನಿರಾಧಾರನಾಗಿ, ಬ್ರಹ್ಮಾನುಭವದ ಮಾರ್ಗದಲ್ಲಿ ಸಂಭ್ರಾಂತನಾಗಿ, ನಾಶಹೊಂದುವುದಿಲ್ಲ ತಾನೇ ? (ನಾಶಹೊಂದದೆ ಇದ್ದರೆ ಮಾತ್ರ ಸಂತೋಷ ಎಂದು ಭಾವ)। (ಏತಂ ಮೇ ಸಂಶಯಂ ಕೃಷ್ಣ ! ಅಶೇಷತಃ ಛೇತ್ತುಮರ್ಹಸಿ । ತ್ವದನ್ಯಃ ಅಸ್ಯಸಂಶಯಸ್ಯಛೇತ್ತಾ ನಹ್ಯುಪ

ಪದ್ಯತೇ) - ಈ ನನ್ನ ಸಂಶಯವನ್ನು ಕೃಷ್ಣ! ನಿಶ್ಶೇಷವಾಗಿ ಕತ್ತರಿಸಿ ಹಾಕಲು ನೀನು ಸಮರ್ಥನಿದ್ದೀಯೆ. ನೀನಲ್ಲದೆ ಮತ್ತಾರೂ, ಈ ಸಂಶಯದ ಪರಿಹಾರಕನು ಆಗಲು ಸಾಧ್ಯವಿಲ್ಲ ॥೩೯॥

ಶ್ರೀ ಭಗವಾನುವಾಚ

**ಪಾರ್ಥ! ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ! ಗಚ್ಛತಿ ॥೪೦॥**

(ಪಾರ್ಥ ! ತಸ್ಯ) ಅರ್ಜುನ ! ಶ್ರದ್ಧಾಳುವಾಗಿ ಕರ್ಮಯೋಗ ನಿಷ್ಠೆ ಅಭ್ಯಾಸ ಮಾಡಿಸಿದ್ಧಿದಶೆಗೆ ಮುಟ್ಟದೆಯೇ ದೇಹತ್ಯಾಗ ಮಾಡಿದ ಅವನಿಗೆ (ಇಹ ಚ ಅಮುತ್ರ ಚ ವಿನಾಶಃ ನವಿದ್ಯತೇ ಏವ) ಪ್ರಾಕೃತ ಭೋಗದಲ್ಲಾಗಲೀ ಬ್ರಹ್ಮಾನುಭವದಲ್ಲಾಗಲಿ ಫಲನಾಶವಿಲ್ಲ ಪ್ರತ್ಯವಾಯ ರೂಪ ಅನಿಷ್ಟ ಪ್ರಾಪ್ತಿಯೂ ಇಲ್ಲ । (ಕಲ್ಯಾಣಕೃತ್ ಕಶ್ಚಿತ್) ನಿರತಿಶಯಮಂಗಳರೂಪವಾದ (ಕರ್ಮ) ಯೋಗಾಭ್ಯಾಸಿಯಾದವನಾವನೂ (ತಾತ!) ಅಪ್ಪ! (ದುರ್ಗತಿಂ ನಗಚ್ಛತಿ, ಹಿ) ಇಷ್ಟನಾಶ ಮತ್ತು ನರಕಾದ್ಯನಿಷ್ಟ ಎಂಬ ದುರ್ಗತಿಯನ್ನು ಹೊಂದುವುದಿಲ್ಲ ಎಂಬೀ ವಿಷಯದಲ್ಲಿ ಸಂಶಯಬೇಡ ॥೪೦॥

**ಪ್ರಾಪ್ಯ ಪುಣ್ಯಕೃತಾಂ ಲೋಕಾನ್ ಉಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋऽಭಿಜಾಯತೇ ॥೪೧॥**

ಅವನಿಗಾಗುವ ಸದ್ಗತಿಯನ್ನೀಗ ಕೇಳು - (ಯೋಗಭ್ರಷ್ಟಃ) ಯೋಗಭ್ರಷ್ಟನು (ಯಾವ ಜಾತಿಯ ಭೋಗಾಪೇಕ್ಷೆಯಿಂದ ಕರ್ಮಯೋಗದಿಂದ ಜಾರಿದನೋ) (ಪುಣ್ಯಕೃತಾಂ ಲೋಕಾನ್) ಅತಿಶಯ

Funding: Tattva Heritage Foundation,Kolkata. Digitization: eGangotri.

ಪುಣ್ಯ ಮಾಡಿದವರ ಲೋಕಗಳನ್ನು ಸೇರಿ ಅಲ್ಲಿ ಆ ಜಾತಿಯ ಅತಿ ಕಲ್ಯಾಣಕರವಾದ ಭೋಗಗಳನ್ನು ಕರ್ಮಯೋಗ ಮಾಹಾತ್ಮ್ಯದಿಂದಲೇ ಅನುಭವಿಸುತ್ತಾ (ಶಾಶ್ವತೀಃ ಸಮಾಃ ಉಷಿತ್ವಾ) ಭೋಗ ತೃಷ್ಣೆಯುತೀರುವವರೆಗೆ ಅನೇಕಾನೇಕ ಸಂವತ್ಸರಗಳ ಕಾಲ ಅಲ್ಲಿ ವಾಸ ಮಾಡಿ (ಶುಚೀನಾಂ ಶ್ರೀಮತಾಂಗೇಹೇ, ಅಭಿಜಾಯತೇ) ಯೋಗಾರಂಭಕ್ಕೆ ಅನುಕೂಲವಾಗಿರುವ ಶುದ್ಧತೆಯೂ ಶ್ರೀಮತ್ತ್ವವೂ, ಇರುವವರ ಮನೆಯಲ್ಲಿ, ಮನುಷ್ಯ ಜನ್ಮ ಪಡೆಯುತ್ತಾನೆ ॥೪೦॥

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಮ್ ಲೋಕೇ ಜನ್ಮ ಯದೀದೃಶಮ್ ॥೪೨॥**

ಅಥವಾ (ಪರಿಪಕ್ವಯೊಗಿಯಾದಾಗ ವಿಚಲಿತನಾಗದೇ ಸಿದ್ಧಿಗೆ ಮುಂಚೆ ದೇಹತ್ಯಾಗವಾಗಿದ್ದರೆ) (ಯೋಗಿನಾಂ, ಧೀಮತಾಂ) ಆತ್ಮಯೋಗಾಭ್ಯಾಸಿಗಳಾಗಿಯೂ, ಯೋಗೋಪದೇಶ ಮಾಡಬಲ್ಲ ಧೀಮನ್ತರಾಗಿಯೂ ಇರುವ ಮಹಾತ್ಮರ (ಕುಲೇ ಏವ) ಗೃಹದಲ್ಲಿ (ಭವತಿ) ಜನ್ಮವೆತ್ತುತ್ತಾನೆ ॥ (ಲೋಕೇ) ಪ್ರಾಕೃತ ಜನರ ವಿಷಯದಲ್ಲಿ (ಯತ್ ಈ ದೃಶ್ಯಂ ಜನ್ಮ) ಯಾವ ಈ ಉಭಯ ವಿಧವಾದ ಜನ್ಮವುಂಟೋ (ಏತತ್) ಇದು (ದುರ್ಲಭ ತರಂ) ಅತಿದುರ್ಲಭ (ಇದು ಯೋಗಮಾಹಾತ್ಮ್ಯದಿಂದ ಉಂಟಾದ ವಿಶೇಷ ಸೌಲಭ್ಯ) ॥೪೨॥

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥೪೩॥**

(ತತ್ರ) ಆ ಜನ್ಮದಲ್ಲಿ (ಪೌರ್ವದೈಹಿಕಂ) ಪೂರ್ವದಲ್ಲಿ ಕರ್ಮಯೋಗ ನಿಷ್ಠ ಮಾನವ ಜನ್ಮವೇನಿತ್ತೋ

ಅದಕ್ಕೆ ಸಂಬಂಧಿಸಿದ (ಬುದ್ಧಿಸಂಯೋಗಂತಂ) ಆತ್ಮಧ್ಯಾನ ಯೋಗಕ್ಕಾಗಿ ಉಂಟಾಗಿದ್ದ ಅದೇ ನಿಶ್ಚಯ ಬುದ್ಧಿಯ ಸಂಯೋಗವನ್ನೇ (ಲಭತೇ) ಹೊಂದುತ್ತಾನೆ । (ತತಃ) ಅದರಿಂದ ಮುಂದುವರೆದು (ಭೂಯಃ) ಇನ್ನೂ ಅಧಿಕವಾಗಿ (ಸಂಸಿದ್ಧೌಯತತೇ (ವಿಘ್ನವಿಹತನಾಗದಂತೆ) ಪೂರ್ಣ ಯೋಗಸಿದ್ಧಿಗಾಗಿ ಪ್ರಯತ್ನಿಸುತ್ತಾನೆ ॥

**ಪೂರ್ವಾಭ್ಯಾಸೇನತೇನೈವ ಹ್ರಿಯತೇ ಹ್ಯವಶೋಽಪಿಸಃ ॥೪೩ ೧/೨॥**

(ಸಃಅವಶಃ ಅಪಿ) ಆತನು ಲೌಕಿಕ ವ್ಯವಹಾರಗಳ ಸಂಬಂಧದಲ್ಲಿ ಪರವಶನಾಗಿದ್ದರೂ ಕೂಡ (ತೇನ ಪೂರ್ವಾಭ್ಯಾಸೇನ ಏವ) ಆ ಪೂರ್ವಜನ್ಮದ ಯೋಗಾಭ್ಯಾಸ ಪ್ರಭಾವದಿಂದಲೇ (ಹ್ರಿಯತೇ) ಯೋಗಮಾರ್ಗದಲ್ಲೇ ಕೊಂಡೊಯ್ಯಲ್ಪಡುತ್ತಾನೆ ॥೪೩ ೧/೨॥

**ಜಿಜ್ಞಾಸುರಪಿ ಯೋಗಸ್ಯ, ಶಬ್ದಬ್ರಹ್ಮಾತಿ ವರ್ತತೇ ॥೪೪॥**

ಯೋಗದಲ್ಲಿ ಪ್ರವರ್ತಿಸದೆ ಯೋಗದ ಬಗ್ಗೆ ಹೀಗೆ ತಿಳಿಯಲಿಚ್ಛಿಸುವವನೂ ಕೂಡ, (ಚಲಿತಮಾನಸನಾದರೂ ಕೂಡ, ಅದೇ ಜಿಜ್ಞಾಸೆಯನ್ನು ಮುಂದುವರಿಸಿ, ಕರ್ಮಯೋಗಾನುಷ್ಠಾನ ಮಾರ್ಗದಿಂದಲೇ,) ಶಬ್ದಬ್ರಹ್ಮವನ್ನು ಮೀರುತ್ತಾನೆ. (ಶಬ್ದಬ್ರಹ್ಮ = ನಾಮರೂಪಭೇದಗಳಿಂದ ಎಲ್ಲ ಕಡೆ ಹರಡಿರುವ ಪ್ರಕೃತಿ । ಶಬ್ದ-ಶಬ್ದಾರ್ಥಗಳಲ್ಲೇ ಇರುವುದೂ ಪ್ರಕೃತಿ ಬಂಧವೇ। ಅದರಿಂದ ಜ್ಞಾನ-ಅನುಷ್ಠಾನದ್ವಾರಾ ಶಾಶ್ವತಾನಂದ ಸಿದ್ಧಿಯವರೆಗೂ ನಡೆದವನು ಪ್ರಕೃತಿ ಬಂಧ ಮೀರಿದವನು । ಶಬ್ದಬ್ರಹ್ಮಾತಿವರ್ತತೇ ಎಂದರೆ ಪ್ರಕೃತಿ ಬಂಧವನ್ನು ಎಲ್ಲ ರೀತಿಯಲ್ಲೂ ದಾಟಿ ಅಪ್ರಾಕೃತವನ್ನು ದರ್ಶನ ಮಾಡುತ್ತಾನೆ ಎಂದು ತಾತ್ಪರ್ಯ)

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ ।**
**ಅನೇಕ ಜನ್ಮ ಸಂಸಿದ್ಧಃ ತತೋ ಯಾತಿ ಪರಾಂಗತಿಮ್ ॥೪೫॥**

(ತತಃ) ಆದ್ದರಿಂದ (ಎಂದರೆ ಈ ರೀತಿ ಯೋಗ ಮಹಾತ್ಮ್ಯವಿರುವುದರಿಂದ) ಸಂಶುದ್ಧ ಕಿಲ್ಬಿಷಃ) ಕರ್ಮಯೋಗಾಚರಣೆಯಿಂದುಂಟಾದ ಭಗವತ್ ಪ್ರೀತಿ ಎಂಬ ಪುಣ್ಯ ವಿಶೇಷದಿಂದ ಪ್ರಾಚೀನವೆಲ್ಲವೂ ಸಂಪೂರ್ಣ ಶೋಧಿಸಲ್ಪಡುವ ಕಾರಣದಿಂದ (ಅನೇಕ ಜನ್ಮ ಸಂಸಿದ್ಧಃ) ಅನೇಕ ಜನ್ಮಗಳಲ್ಲಿ ಚೆನ್ನಾಗಿ ಯೋಗ ಯೋಗ್ಯನಾಗಿ (ಪ್ರಯತ್ನಾದ್ ಯತಮಾನಸ್ತು ಯೋಗೀ) ಇನ್ದ್ರಿಯ-ಮನೋ-ಬುದ್ಧಿನಿಯಮನ ಪೂರ್ವಕವಾಗಿ ಬಿಡದೆ ಯತ್ನಶೀಲನಾಗಿ ಯೋಗಾಭ್ಯಾಸ ಮಾಡುವಾತನು (ಹಿಂದೆ ವಿಚಲಿತನಾಗಿದ್ದರೂ ಕೂಡ) (ಪರಾಂಗತಿಂ ಯಾತಿ) ಯೋಗಸಾಧ್ಯವಾದ ಪರಮಗತಿಯನ್ನು (ಎಂದರೆ ಆತ್ಮ ಸ್ವರೂಪಸಾಮ್ರಾಜ್ಯ ಪ್ರಾಪ್ತಿಯನ್ನು) ಪಡೆದೇ ಪಡೆಯುತ್ತಾನೆ ॥ (ಕರ್ಮಯೋಗವಾಗಲಿ ಯೋಗಾಭ್ಯಾಸವಾಗಲಿ ಒಂದೇ ಜನ್ಮದಲ್ಲಿ ಪೂರ್ಣಸಿದ್ಧಿದಶೆಗೆ ಬರುವುದು ವಿರಳ)

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋಯೋಗೀ । ತಸ್ಮಾದ್ಯೋಗೀ ಭವಾರ್ಜುನ ॥೪೬॥**

(ಐಶ್ವರ್ಯ-ಅಧಿಕಾರ-ಶಕ್ತಿ ವಿಶೇಷ-ಪ್ರಾಕೃತಭೋಗವಿಶೇಷ ಇತ್ಯಾದಿಗಾಗಿ ತಪಸ್ಸು ಮಾಡುವವರಿಗಿಂತ, ಆತ್ಮೇತರವಾದ ಅನಿತ್ಯವಸ್ತುಗಳ ಬಗ್ಗೆ ಜ್ಞಾನ ಭಂಡಾರವನ್ನು ಸಂಪಾದಿಸಿಕೊಂಡಿರುವವರಿಗಿಂತ ಹಾಗೂ ನಿತ್ಯವಸ್ತುಗಳ ಶ್ರವಣ ಜ್ಞಾನ ಮಾತ್ರವೇ ಉಳ್ಳವರಿಗಿಂತ, ಅಶ್ವಮೇಧಾದಿ ಕರ್ಮ ನಿಷ್ಠ ಶಿಷ್ಟ ಶ್ರೇಷ್ಠರಿಗಿಂತ, ಯೋಗಾಭ್ಯಾಸ ಯೋಗಿ ಮಿಗಿಲು । ಏಕೆಂದರೆ ಅವರಾರೂ ಅಪ್ರಾಕೃತವಾದ ಆತ್ಮಸ್ವರೂಪ ಪ್ರಾಪ್ತಿಗೆ ಯೋಗ್ಯರಲ್ಲ ॥ ಅವರೆಲ್ಲರೂ ತಮ್ಮ ತಪೋ-ಜ್ಞಾನ-ಕರ್ಮಗಳಿಂದ ಪಡೆಯಬಲ್ಲ ಎಲ್ಲ ನಿತ್ಯ

ಪುರುಷಾರ್ಥಗಳಿಗಿಂತ ಅತಿಮಿಗಿಲಾದ "ಅಮೃತತ್ವದ ಒಂದು ಅದ್ಭುತ ರೂಪವನ್ನೇ ಇವನು ಪಡೆಯುವಂತಹವನು ॥ ಕರ್ಮಯೋಗವೇ ಅದಕ್ಕೆ ದಾರಿ । ಇಂತಹ ಕರ್ಮಯೋಗ ಮಾರ್ಗದಿಂದಲೇ ಶೀಘ್ರ ಆತ್ಮಯೋಗಿಯ ದಶೆಗೆ ಬರುವವನಾಗು ಅರ್ಜುನ । ಎಂದು ತಾತ್ಪರ್ಯ)

ಹೀಗೆ ಪರಮಾತ್ಮ ವಿದ್ಯೆಗೆ ಅಂಗಭೂತವಾದ ಜೀವಾತ್ಮದರ್ಶನವು (ಉಪನಿಷತ್ತಿನಲ್ಲಿ ಪ್ರಜಾಪತಿವಾಕ್ಯೋಕ್ತವಾಗಿರುವುದು ಪ್ರಸಿದ್ಧವಾಗಿದೆ. ಅದು ಇಲ್ಲಿಯವರೆಗೂ) ಪ್ರತಿಪಾದಿತವಾಯಿತು. ಇನ್ನು ಪರಮಾತ್ಮ ವಿದ್ಯೆಯನ್ನು ಮುಂದೆ ವಿಸ್ತಾರವಾಗಿ ಪ್ರತಿಪಾದಿಸಲು ಈಗ ಪ್ರಸ್ತಾಪಿಸುತ್ತಾನೆ ಶ್ರೀ ಕರಣಾಳು –

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೪೭॥**

(ಯೋಗಿನಾಮ್) ಮೇಲೆ ಹೇಳಿದ ನಾಲ್ಕು ವಿಧ ಆತ್ಮಯೋಗಿಗಳಿಗಿಂತಲೂ (ಅಪಿ ಸರ್ವೇಷಾಮ್) ಮತ್ತಿತರ ತಪಸ್ವಿ-ಜ್ಞಾನಿ-ಕರ್ಮಿ ಎಲ್ಲರಿಗಿಂತಲೂ, (ಮದ್ಗತೇನಾನ್ತರಾತ್ಮನಾ) ನನ್ನನ್ನೇ ಸಾಕ್ಷಾತ್-ಕರಿಸಿಕೊಳ್ಳುವ ಒಳಮನಸ್ಸಿನ ಬಯಕೆಯಿಂದ (ಶ್ರದ್ಧಾವಾನ್ ನನ್ನನ್ನೇ ಬಂದು ಸೇರುವ ಅಂತಃ ಪ್ರವೃತ್ತಿಯಲ್ಲಿ ತ್ವರೆಯಿಂದ ಕೂಡಿದವನಾಗಿ (ಯಃ ಮಾಂ ಭಜತೇ) ಯಾವಾತನು ನನ್ನನ್ನು ಉಪಾಸನೆ ಮಾಡುತ್ತಾನೋ (ಸಃ ಯುಕ್ತತಮಃ) ಅವನು ಶ್ರೇಷ್ಠತಮ ಯೋಗಿಯೆಂದು (ಮೇಮತಃ) ನನಗೆ ಅತ್ಯಂತ ಅಭಿಮತನಾಗುತ್ತಾನೆ ॥

**ಇತಿ ಶ್ರೀಮದ್ ಭಗವದ್ಗೀತಾಸು ಉಪನಿಷತ್ಸು ಬ್ರಹ್ಮ ವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಯೋಗಾಭ್ಯಾಸ ಯೋಗೋನಾಮ ಷಷ್ಠೋಧ್ಯಾಯಃ॥।**

## ೫. ಲೌಕಿಕಕ್ಕೆ ಗೀತೆಯ ಎಳೆದಾಟ -

### (೧) ಯೋಗ ಕ್ಷೇಮಂ ವಹಾಮ್ಯಹಮ್ (ಅಧ್ಯಾಯ ೯, ಶ್ಲೋಕ ೨೨)

"ಅನನ್ಯಾಃ ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ? ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ.......॥"

ಇದು ಶ್ರೀಭಗವಂತನ ಮಾತು 'ಅನನ್ಯಭಕ್ತರಿಗೆ ನನ್ನ ಪ್ರಾಪ್ತಿಯಾಗುವಂತೆ ಮತ್ತು ಇನ್ನು ಕರ್ಮ ಬಂಧರೂಪ ಸಂಸಾರಕ್ಕೆ ಹಿಂತಿರುಗಿ ಬೀಳದೆ ನನ್ನ ಜೊತೆಯೇ ಎಂದೆಂದಿಗೂ ಇರುವಂತೆ ನಾನು ನೋಡಿಕೊಳ್ಳುತ್ತೇನೆ"

ಹೀಗೆ ಗೀತೆಯಲ್ಲಿ ಶ್ರೀಭಗವಂತನು ಅನನ್ಯ ಭಕ್ತರ ಭಗವತ್ ಪ್ರಾಪ್ತಿಯೋಗ ಮತ್ತು ಅಪುನರಾವೃತ್ತಿ ರೂಪ ಕ್ಷೇಮದ ಬಗ್ಗೆ ಭರವಸೆ ನೀಡಿದ್ದಾನೆ ; ಆದರೆ ನಮ್ಮ ಬಗ್ಗೆ ನಮ್ಮ ಆಶ್ರಿತರ ಬಗ್ಗೆ ನಮ್ಮ ವಾಹನಾದಿಗಳ ಬಗ್ಗೆ, ನಮ್ಮ ಆರೋಗ್ಯದ ಬಗ್ಗೆ, ನಮ್ಮ ಬೃಹದ್ ಭವನಗಳ ಬಗ್ಗೆ ಯಾವ ಆರ್ಥಿಕ, ಅಥವಾ ಬೇರೆ ಯಾವುದೇ ರೀತಿಯ, ವ್ಯಾವಹಾರಿಕ, ಒಪ್ಪಂದ ಮಾಡಿಕೊಂಡಿಲ್ಲ. 'ಯಚ್ಚ ಮಾಂ ನೋಪಜೀವತಿ' 'ನನ್ನನ್ನವಲಂಬಿಸಿ ಲೌಕಿಕ ಜೀವನ ನಡೆಸಿಕೊಳ್ಳದಿರುವುದು' ಇದು ನಿಜವಾದ ಭಕ್ತಿಯ ಎಂಟು ಲಕ್ಷಣಗಳಲ್ಲಿ ಎಂಟನೆಯ ಲಕ್ಷಣ ಎನ್ನುತ್ತಾನೆ, ಶ್ರೀಭಗವಂತ ಭಗವಚ್ಛಾಸ್ತ್ರವೆಂದು ಪ್ರಸಿದ್ಧವಾಗಿರುವ ಪಾಂಚರಾತ್ರಾಗಮದಲ್ಲಿ. ಗೀತೆಯಲ್ಲಿರುವ ಅವನ ಅಮೃತವಚನಗಳೆಲ್ಲ ಪಾರಮಾರ್ಥಿಕ ಯೋಗವನ್ನೂ ಪಾರಮಾರ್ಥಿಕ ಕ್ಷೇಮವನ್ನೂ ಜೀವಾತ್ಮರುಗಳಿಗೆ ದೊರಕಿಸಲು ಬೇಕಾದ

ಜೀವನ ಕ್ರಮವನ್ನು ಬೋಧಿಸಲು ಉದ್ಭವಿಸಿವೆ. ಧನಲಾಭದ ಬಗ್ಗೆ ಗೀತೆಯ ಯಾವ ಮಾತೂ ಸಂಬಂಧಿಸಿಲ್ಲ. ಧನದ ರೂಪದಲ್ಲಿ ವ್ಯವಹಾರ ನಡೆಸುವ ಯಾವ ಸಂಸ್ಥೆಯೂ ಗೀತೆಯ ಶ್ರೀ ಭಗವದ್ ವಚನಗಳನ್ನು ತನ್ನ ಧ್ಯೇಯವಾಕ್ಯವಾಗಿಟ್ಟುಕೊಳ್ಳುವುದು ಗೀತೆಗೆ ಅಪಚಾರವಲ್ಲವೇ ?

(೨) "ನ ಹಿ ಜ್ಞಾನೇನ ಸದೃಶಮ್" (೪-೩೮) ಕರ್ಮಯೋಗದಲ್ಲಿ ಅತ್ಯಂತ ಜಾಜ್ವಲ್ಯಮಾನವಾಗಿ ಇರಬೇಕಾದ, ಆತ್ಮಯಾಥಾತ್ಮ್ಯ ಜ್ಞಾನದ, ಪ್ರಭಾವ ಎಷ್ಟು ಪ್ರಖರ ಎಂದು ತಿಳಿಸುವ ಮಾತು ಇದು. ಇದರ ಹಿಂದಿನ ಶ್ಲೋಕದ ಅರ್ಥಕ್ಕೆ ಸೇರಿಸಿಕೊಳ್ಳಬೇಕಾದ ಶೇಷಭಾಗವಿದು. "ಹಿ-ಏಕೆಂದರೆ, ಜ್ಞಾನೇನ = ಆತ್ಮ ಸ್ವರೂಪದ ಯಥಾವತ್ತಾದ ಜ್ಞಾನಕ್ಕೆ, ಸದೃಶಂ = ಸಮಾನವಾದ, ಪವಿತ್ರಂ = ಶುದ್ಧಿಕಾರಕ ವಸ್ತುವು, ಇಹ = ಈ ಜಗತ್ತಿನಲ್ಲಿ, ನ ವಿದ್ಯತೇ = ಬೇರೊಂದು ಇಲ್ಲ" "ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ" - ಇದು ಪೂರ್ಣವಾಕ್ಯ; ೪ ನೇ ಅಧ್ಯಾಯದ ೩೮ ನೇ ಶ್ಲೋಕದ ಪೂರ್ವಾರ್ಧ। ಇದು, 'ಏಕೆಂದರೆ' ಎಂಬ ಮಾತಿನಿಂದ ಪ್ರಾರಂಭಿಸುತ್ತದೆ। ಎಂದ ಮೇಲೆ ಹಿಂದೆ ೩೭ ನೇ ಶ್ಲೋಕದಲ್ಲಿ ಏನು ಹೇಳಿದೆಯೋ, ಅದಕ್ಕೆ ಕಾರಣವನ್ನು ತಿಳಿಸುವ ಮಾತು ಇದು, ಎನ್ನುವುದು ಇದರಿಂದ ಸ್ಪಷ್ಟ. ೩೭ ರಲ್ಲಿ ಏನಿದೆ ನೋಡೋಣ. "ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ ಕುರುತೇಽರ್ಜುನ! ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ." ಎಲೈ ಅರ್ಜುನ ! ಹೇಗೆ ಇಂಧನವನ್ನೆಲ್ಲ, ಧಗಧಗಿಸುವ ಅಗ್ನಿಯು ಭಸ್ಮಮಾಡಿ ಬಿಡುತ್ತದೆಯೋ ಹಾಗೆ ಆತ್ಮಯಾಥಾತ್ಮ್ಯ ಜ್ಞಾನವೆಂಬ ಕರ್ಮಯೋಗಾನ್ತರ್ಗತ ಜ್ಞಾನಭಾಗವು (ಪ್ರಜ್ವಲಿಸುತ್ತಿದ್ದರೆ) ಜೀವಾತ್ಮನಲ್ಲಿರುವ ಅನಾದಿಕಾಲ

ಸಂಚಿತವಾದ ಪ್ರಾಚೀನ ಕರ್ಮವೆಲ್ಲವನ್ನೂ ಭಸ್ಮಮಾಡಿಬಿಡುತ್ತದೆ. ಇದು ೩೭ ನೇ ಶ್ಲೋಕದ ಅರ್ಥ. ಹೀಗೆ ಭಸ್ಮಮಾಡ ಬಲ್ಲ ಸಾಮರ್ಥ್ಯ 'ಜ್ಞಾನ'ಕ್ಕೆ ಇರಲು ಕಾರಣವೇನು ? ಎಂದರೆ ಅದಕ್ಕೆ ಸಮಾನವಾದ 'ಪವಿತ್ರ', ಈ ಪ್ರಾಕೃತವಸ್ತು ಪ್ರಪಂಚದಲ್ಲಿ ಮತ್ತಾವುದೂ ಇಲ್ಲ ಎಂಬುದು ಕಾರಣ. 'ಪವಿತ್ರ' ಎಂದರೇನು? 'ಪವಿ' ಎಂದರೆ ಇಂದ್ರನ ವಜ್ರಾಯಧದಂತೆ, ಅಥವಾ ಸಿಡಿಲಿನಂತೆ, ವಿನಾಶಕರವಾದ ವಸ್ತು. ಪಾಪವು ಹೀಗೆ, ಆತ್ಮ ವಿನಾಶಕ, ಎಂದರೆ ನರಕದ ಘೋರ ದುಃಖ ಉಂಟುಮಾಡಿ, ಬದುಕೂ ಇಲ್ಲ ಸತ್ತೂ ಇಲ್ಲ ಎಂಬಂತೆ ಅತ್ಯಂತ ನರಳಿಸುವ ಶಕ್ತಿ ಪಾತಕಕ್ಕೆ ! ಅದೇ ಆತ್ಮಕ್ಕೆ 'ಪವಿ'. ಅದರ ದೆಸೆಯಿಂದ ಕಾಪಾಡುವಂತಹುದು, 'ಜ್ಞಾನ' ವಿಲ್ಲದ ಬರೀ ಶಾಸ್ತ್ರೀಯ ಕರ್ಮಾದಿಗಳಲ್ಲ ; ಪುಣ್ಯವೂ ಅಲ್ಲ (ಪುಣ್ಯಕ್ಕೆ ಬೇರೆ ಫಲ, ಪಾಪಕ್ಕೆ ಬೇರೆ ಫಲ, ಒಂದನ್ನೊಂದು ಹೋಗಿಸುವುದಿಲ್ಲ) ; ಪುಣ್ಯಸ್ಥಾನಗಳೂ ಪ್ರಾಚೀನ ಕರ್ಮವನ್ನೆಲ್ಲ ಹೀಗೆ ಹೋಗಿಸಲಾರವು. ಅಷ್ಟು ಹೋಗಿಸಿದಿದ್ದರೆ ಆತ್ಮಸ್ವರೂಪವೈಭವದ ಸಾಕ್ಷಾತ್ಕಾರವಾಗಿ ಬಿಡುತ್ತಿತ್ತು, ಪುಣ್ಯ ಸ್ಥಾನ ಸಂಪರ್ಕದಿಂದ. ಆದರೆ ಕರ್ಮಯೋಗದಲ್ಲಿ ಅನ್ತರ್ಗತವಾಗಿ ಜಾಜ್ವಲ್ಯಮಾನವಾಗಿ ಆತ್ಮಸ್ವರೂಪಯಾಥಾತ್ಮ್ಯ ಜ್ಞಾನವಿದ್ದರೆ, ಕರ್ಮಯೋಗದ ಪರಿಪಾಕದಶೆಯಲ್ಲಿ ಆಜ್ಞಾನವು ವಿಶೇಷವಾಗಿ ಪ್ರಜ್ವಲಿಸಿ ಪ್ರಾಚೀನವನ್ನೆಲ್ಲ ದಹಿಸಿ ಬಿಡುತ್ತದೆ ! ಅಲ್ಲಿಗೆ 'ಪವಿ' ಹೋದಂತಾಯಿತು. ಆಗ ನಿಜ ಸ್ವರೂಪ ಸಾಕ್ಷಾತ್ಕಾರವುಂಟಾಗುತ್ತದೆ. ಆದ್ದರಿಂದ 'ಜ್ಞಾನಕ್ಕೆ' ಸಮಾನವಾಗಿ 'ಪವಿ' ಯಿಂದ ತ್ರಾಣ ಮಾಡುವ ಎಂದರೆ ಕಾಪಾಡುವ ಪ್ರಾಕೃತವಸ್ತು ಅಥವಾ ವಿದ್ಯೆ ಯಾವುದೂ ಇಲ್ಲ.

ಭೌತ ಶಾಸ್ತ್ರ, ಪ್ರಾಣಿದೇಹಶಾಸ್ತ್ರ, ಅಣು ಜೀವಿ ಶಾಸ್ತ್ರ, ಚರಿತ್ರೆ, ಭೂಗೋಳ, ಸಮಾಜ ಜೀವನಾಧ್ಯಾಯನ, ಭಾಷಾ ವಿಜ್ಞಾನ, ಭಾಷೆಗಳ ಅಧ್ಯಯನ, ಅರ್ಥಶಾಸ್ತ್ರ, ರಾಜನೀತಿ ಶಾಸ್ತ್ರ, ಇತ್ಯಾದಿ

ಯಾವುದೂ ವಿಧ್ಯಾಭ್ಯಾಸ ಮನುಷ್ಯ ಜನ್ಮ ಬಂದಿರುವುದನ್ನು ಸಾರ್ಥಕಗೊಳಿಸುವುದಿಲ್ಲ. ಏಕೆಂದರೆ ಮರದಲ್ಲಾಗಲಿ, ಪ್ರಾಣಿಯಲ್ಲಾಗಲಿ, ಮನುಷ್ಯನಲ್ಲಾಗಲಿ, ಬ್ರಹ್ಮಾದಿ ದೇವತೆಗಳಲ್ಲಾಗಲಿ, ಇರುವ ನಿತ್ಯವಸ್ತುವಾದ ಆಯಾ ಆತ್ಮದ ಬಗ್ಗೆ ಎಲ್ಲೂ ಆಧುನಿಕ ವಿದ್ಯೆಗಳಲ್ಲಿ ಮಾಹಿತಿ ಸಿಕ್ಕುವುದಿಲ್ಲ ; ಎಲ್ಲೋ ಒಂದು ಮೂಲೆಯಲ್ಲಿ ಸಿಕ್ಕಿದರೂ ಯಥಾವತ್ತಾಗಿ ಸಿಕ್ಕುವುದಿಲ್ಲ. ಅದು ಉಪನಿಷತ್ತುಗಳಲ್ಲಿ, ಗೀತೆಯಲ್ಲಿ, ಬ್ರಹ್ಮಸೂತ್ರಗಳಲ್ಲಿ ಮಾತ್ರ ಸಾಧಕನಿಗೆ ಸಿಕ್ಕಬಹುದಾದ ಜ್ಞಾನ. ಆದರೆ ಯಾರೋ ಆಧುನಿಕ ವಿದ್ಯಾಲಯ ಅಧ್ಯಾಪಕರಿಂದ ಉಪನಿಷದ್-ಗೀತೆ-ಬ್ರಹ್ಮಸೂತ್ರಗಳ ಪಾಠ ಮಾಡಲ್ಪಟ್ಟ ಮಾತ್ರಕ್ಕೆ ಸಿಕ್ಕಿಬಿಡುವಂತಹುದಲ್ಲ ಅದು. ಪರೀಕ್ಷೆ ಪಾಸ್ ಮಾಡುವಷ್ಟು ಜ್ಞಾನದೊರಕಬಹುದೇ ಹೊರತು, ಯಾವ ಯೋಗ ರಹಸ್ಯವಾಗಲಿ ನಿತ್ಯವಸ್ತುಜ್ಞಾನವಾಗಲಿ ಕಾಲೇಜ್‌ಗಳಲ್ಲಿ ದೊರಕುವುದಿಲ್ಲ. ಏಕೆಂದರೆ ವಿನೀತವಸ್ತ್ರ, ಶಾಸ್ತ್ರೀಯ ಅನುಷ್ಠಾನ, ಗುರುಕುಲವಾತಾವರಣ, ಅಪಾರ ಆತ್ಮೋದ್ಧಾರತ್ವರೆ, ಅಚ್ಚಳಿಯದ ಶ್ರದ್ಧೆ, ಸದಾಚಾರ್ಯರು, ಇತ್ಯಾದಿ ಇತ್ಯಾದಿ ಯಾವ ಗುರುಲಕ್ಷಣ - ಶಿಷ್ಯ ಲಕ್ಷಣ-ಮೋಕ್ಷವಿದ್ಯಾಸ್ಥಾನಲಕ್ಷಣಗಳು ನಮ್ಮ ಆಧುನಿಕ ವಿದ್ಯಾಲಯಗಳಲ್ಲಿ ಶಾಲೆಗಳಲ್ಲಿ ಇಲ್ಲ. ಅಲ್ಲಲ್ಲಿ ಸಿಕ್ಕುವುದು ಅನಿತ್ಯ ವಸ್ತುಜ್ಞಾನ ಮಾತ್ರ. ಇದನ್ನು ''ಜ್ಞಾನ''ವೆಂದು ಹೆಸರಿಸುವುದೇ ಇಲ್ಲ - ತತ್ತ್ವಶಾಸ್ತ್ರ.

''ಜ್ಞಾನ'' ಲಭಿಸಿದ್ದರೆ ಲಕ್ಷಣಗಳು ಮನುಷ್ಯನಲ್ಲಿ ಹೇಗೆ ಕಾಣಿಸಿಕೊಳ್ಳುತ್ತವೆ ಎಂದರೆ ''ಗೀತೆ'' ಹೇಳುತ್ತದೆ '':ಅಮಾನಿತ್ವಮ್, ಅದಂಭಿತ್ವಮ್, ಅಹಿಂಸಾ ಕ್ಷಾನ್ತಿಃ, ಆರ್ಜವಮ್ । ಆಚಾರ್ಯೋಪಾಸನಂ, ಶೌಚಂ, ಸ್ಥೈರ್ಯಮ್, ಆತ್ಮವಿನಿಗ್ರಹಃ ॥.........'' ಅಧ್ಯಾಯ ೧೩. ಶ್ಲೋಕ ೭-೧೧ ಎಂದರೆ ''ನಾನು ಮೇಲೆಂಬ ಭಾವವಿಲ್ಲದಿರುವಿಕೆ, ಡಂಭಾಚಾರವಿಲ್ಲದಿರುವಿಕೆ,

ಮೈ-ಮಾತು-ಮನಸ್ಸುಗಳಲ್ಲಿ ಯಾರಿಗೂ ನೋವುಂಟು ಮಾಡದಿರುವಿಕೆ, ತನಗಾಗುವ ಅಪರಾಧ ಮತ್ತು ಕಷ್ಟಗಳನ್ನು ಸಹಿಸುವ ಸಹಜ ಸಾಮರ್ಥ್ಯ, ತ್ರಿಕರಣಗಳಲ್ಲೂ ಸಾಮರಸ್ಯ, ಆತ್ಮ ಪರಮಾತ್ಮ ಜ್ಞಾನಪ್ರದನಾದ ಸದಾಚಾರ್ಯನ ಸಕಲವಿಧ ಸೇವೆಯಲ್ಲಿ ಶ್ರದ್ಧೆ, ಮೈ-ಮಾತು-ಮನಸ್ಸುಗಳಲ್ಲಿ ಕಶ್ಮಲವಿಲ್ಲದಿರುವಿಕೆ, ಸ್ಥಿರ ಬುದ್ಧಿ, ಮನಸ್ಸಂಯಮ...'' ಇತ್ಯಾದಿ ಇಪ್ಪತ್ತು ಲಕ್ಷಣಗಳುಂಟಾಗುತ್ತವೆ ನಿಜವಾದ ಜ್ಞಾನದ ಲಾಭದಿಂದ. ಇದರಲ್ಲಿ ಒಂದಾದರೂ ಉಂಟಾಗಿರುವುದು ಕಂಡಿದೆಯೇ ಆಧುನಿಕ ವಿದ್ಯಾಭ್ಯಾಸದಿಂದ ? ಅಥವಾ ಇವುಗಳಲ್ಲಿ ಒಂದಾದರೂ ಉಂಟಾಗಬೇಕೆಂಬ ಧ್ಯೇಯವಿದೆಯೇ ಆ ವಿದ್ಯಾಭ್ಯಾಸದಲ್ಲಿ ? ಜಡವಸ್ತು ವಿದ್ಯೆಯಲ್ಲಿ ನಶ್ವರ ವಿಷಯಗಳ ಅಧ್ಯಯನದಲ್ಲಿ, ಇದು ಸಾಧ್ಯವೇ ಇಲ್ಲ. ಗೀತೆಯ ಪ್ರಕಾರ ಯಾವುದು ''ಅಜ್ಞಾನಂ ಯತ್ ಅತೋऽನ್ಯಥಾ'' ಎಂದು ಅಜ್ಞಾನವಾಗಿ ಹೇಳಲ್ಪಟ್ಟಿದೆಯೋ ಅದನ್ನೇ ಹೇಳಿಕೊಡುವ, ''ಸರ್ವಜ್ಞಾನವಿಮೂಢಾನ್ ತಾನ್ ವಿದ್ಧಿ'' (೪/೩೨) ಎಂಬುದಾಗಿ ''ಪರಮಾತ್ಮನ ಸರ್ವಾತ್ಮ-ಅನ್ತರ್ಯಾಮಿತ್ವ''ದ ಅಧ್ಯಯನ ಜ್ಞಾನವಿಲ್ಲದವರು ವಿಮೂಢರು ಎಂದರೆ ವಿಶೇಷ ಮೂಢರು ಎಂದು ಗೀತೆ ಯಾರನ್ನು ಹೇಳುತ್ತದೆಯೋ ಅಂತಹ ವಿದ್ಯಾವಂತರನ್ನು ತಯಾರುಮಾಡುವ, ವಿದ್ಯಾಲಯಗಳ ಸಂಸ್ಥೆಯು ಗೀತೆಯ ಅಮೃತವಚನದ ಯಾವುದೋ ಅಪೂರ್ಣ ಭಾಗವನ್ನು ಯಾವುದೋ ಲೌಕಿಕಾರ್ಥ ಬರುವಂತೆ ತನ್ನ ಧ್ಯೇಯ ವಾಕ್ಯವಾಗಿ ಉಪಯೋಗಿಸಿಕೊಂಡರೆ, ಗೀತಾವಾಕ್ಯಕ್ಕೆ ತಪ್ಪರ್ಥವನ್ನು ಜನಮನದಲ್ಲಿ ಬಿತ್ತಿದಂತಾಗಿ ಗೀತೆಗೆ ಹೀಗೆ ಅಪಚಾರವಾಗುತ್ತದೆಯಲ್ಲವೇ ?

''ವಿದ್ಯೆಯು ಬಾಳಿಗೆ ಬೆಳಕು'', ''ವಿದ್ವಾನ್ ಸರ್ವತ್ರ ಪೂಜ್ಯತೇ'' ''ವಿದ್ಯಾಧನಂ ಸರ್ವಧನ

ಪ್ರಧಾನಮ್ ನಾಸ್ತಿ ವಿದ್ಯಾಸಮಂ ವಿತ್ತಮ್'' ಎಂಬೀ ರೀತಿ ಬೇರೆ ಲೌಕಿಕ ಸುಭಾಷಿತಗಳನ್ನು ಆಧುನಿಕವಿದ್ಯಾಲಯ ಸಂಸ್ಥೆಗಳು ತಮ್ಮ ಧ್ಯೇಯವಾಕ್ಯಕ್ಕಾಗಿ ಪರಾಮರ್ಶಿಸಿ ನೋಡುವುದು ಉತ್ತಮ ಎನಿಸುತ್ತದೆ.

### ೩) ಯೋಗಃ ಕರ್ಮಸು ಕೌಶಲಮ್ (೨-೫೦)

''ಯೋಗವು ಕರ್ಮಗಳಲ್ಲಿ ಕುಶಲತೆ'' ಎಂಬೀ ಮೂರು ಪದಗಳ ಗೀತಾ ಶ್ರೀ ಸೂಕ್ತಿ, ಗೀತಾಭ್ಯಾಸವನ್ನು ಸದಾಚಾರ್ಯರಿಂದ ಸರಿಯಾಗಿ ಮಾಡದವರಿಗೆ ತಪ್ಪರ್ಥವನ್ನು ಬಹಳ ಬೇಗ ಉಂಟುಮಾಡುವ ಅಪಾಯವಿದೆ. ಆ ತಪ್ಪರ್ಥವೇನೆಂದರೆ - ''ಕರ್ಮಗಳಲಿ ಕುಶಲತೆಯೇ ಯೋಗ ಎನಿಸಿಕೊಳುತ್ತದೆ'' ಎಂಬುದು. ಇದು ತಪ್ಪರ್ಥ ಮತ್ತು ಅಪಾಯಕರ. ''ಅಪಾಯಕರ'' ಏಕೆಂದರೆ, ''ಸೌಟನ್ನು ಚೆನ್ನಾಗಿ ಹಿಡಿದು ಸೌಟಿನ ಕೆಲಸ ಚೆನ್ನಾಗಿ ಮಾಡುವುದು ಬಂದರೆ ಅದೂ ಒಂದು ಯೋಗವೇ (ಸೌಟುಯೋಗ!)'' ಎಂಬೀ ಸರಣಿಯಲ್ಲಿ ಮಾತು ಬೆಳೆಸುತ್ತಾ, ''ಕ್ಷೌರ ಕರ್ಮಯೋಗ'' ''ಚೋರ ಕರ್ಮ - ಯೋಗ'' ''ಲೂಟಿ ಕರ್ಮ - ಯೋಗ'' ''ವಂಚನ ಕರ್ಮ - ಯೋಗ'' ''ಅಭಿನಯ ಯೋಗ'' ''ಏಪ್ರಿಲ್ ಫೂಲ್ ಕರ್ಮ - ಯೋಗ'' ಹೀಗೆ ಯಾವ ಯಾವ ಕೆಲಸವನ್ನು ಅತಿ ಬುದ್ಧಿವಂತಿಕೆಯಿಂದ ಇತರರನ್ನು ಮೀರಿಸುವಷ್ಟು ಸಾಮರ್ಥ್ಯದಿಂದ ಮಾಡಿದರೆ ಅದೆಲ್ಲ ಒಂದು ಯೋಗ ಎಂದು ಗೀತೆ ಹೇಳುವುದಾಗಿ ತಿಳಿಯಬೇಕಾಗುತ್ತದೆ !

ಇದೆಲ್ಲ ತಪ್ಪರ್ಥ, ಗೀತೆಯ ಆ ಮೂರು ಪದಗಳ ವಾಕ್ಯಕ್ಕೆ. ಏಕೆಂದರೆ ಪ್ರಕರಣವನ್ನು ಸರಿಯಾಗಿ ಅಧ್ಯಯನ ಮಾಡಿದರೆ ಸರಿಯಾದ ಅರ್ಥ ಬೇರೆ ಇರುವುದು ಗೊತ್ತಾಗುತ್ತದೆ. ಸದ್ಗುರು ಕೃಪೆಯಿಂದ. ಅದೇನೆಂದರೆ "ಕರ್ಮದಲ್ಲಿ ಯೋಗವು ಕುಶಲತೆ" ಎಂದು. ಇಲ್ಲಿ "ಕರ್ಮ" ಎಂದರೆ ಶಾಸ್ತ್ರವಿಹಿತ ಕರ್ಮಾಚರಣೆ ಮತ್ತು ಅದಕ್ಕನುಗುಣವಾಗಿ ಪೋಷಕವಾಗಿ ಇರುವ ದ್ರವ್ಯಾರ್ಜನೆ-ಪಚನ-ಭೋಜನ-ನಿದ್ರಾದಿ ಲೌಕಿಕ ಕರ್ಮಾಚರಣೆ. ಅವುಗಳಲ್ಲಿ "ಯೋಗವು" ಸೇರಿದರೆ ಮಾತ್ರ ಅದು ಕರ್ಮ ಆಚರಿಸುವವನ ಕುಶಲತೆ, ಎಂದರ್ಥ. "ಯೋಗ" ವೆಂದರೇನು? "ಸಮತ್ವಂ ಯೋಗ ಉಚ್ಯತೇ" ಸಿದ್ಧಿ ಅಸಿದ್ಧಿಗಳಲ್ಲಿ ಲಾಭ-ನಷ್ಟಗಳಲ್ಲಿ, ಸುಖ-ದುಃಖಗಳಲ್ಲಿ, ಮಾನ-ಅವಮಾನಗಳಲ್ಲಿ, ಜಯ-ಅಪಜಯಗಳಲ್ಲಿ ಹೀಗೆ ಏನೇ ಬಂದರೂ ಸಮಚಿತ್ತನಾಗಿ, ಅವಿಚಲಿತಚಿತ್ತನಾಗಿ, ಮನಸ್ಸಿನ ನಿರ್ಮಲತೆ, ಶಾಂತಿ, ಕೆಡೆಸಿಕೊಳ್ಳದಿರುವಿಕೆಯೇ "ಸಮತ್ವ" ಇದೇ "ಯೋಗ" ಅಥವಾ "ಬುದ್ಧಿಯೋಗ" ಎಂಬುದಾಗಿ ಈ ಶ್ಲೋಕದ ಹಿಂದಿನ ಶ್ಲೋಕಗಳಲ್ಲಿ ಗೀತೆ ಸ್ಪಷ್ಟಪಡಿಸುತ್ತದೆ. ಹೀಗೆ "ಸಮತ್ವವು" ಸರ್ವವಿಧ ಕರ್ಮಾಚರಣೆಗಳಲ್ಲೂ ಇರಲು ಸಾಧ್ಯವಾಗುವಿಕೆಯೇ "ಕೌಶಲ", ಎಂದರೆ ಅಪೂರ್ವ ಸಾಮರ್ಥ್ಯ, ಅಪಾರ ಆತ್ಮಬಲ, - ಎಂದುತಾತ್ಪರ್ಯ. ಹೀಗೆ ಗೀತೆಯಲ್ಲಿ ಸಾಧಕನಾದ ಕರ್ಮಯೋಗಿಗೆ ಅಮೃತತ್ತ್ವ ಹೊಂದಲು ಜೀವನದ ಕ್ರಮ ಹೇಗಿರಬೇಕೆಂದು ಚಿತ್ರಿಸಲಾಗಿದೆ, ಸ್ಪಷ್ಟೀಕರಿಸಲಾಗಿದೆ. ಸಂಸ್ಕೃತ ಭಾಷಾಜ್ಞಾನವಿದ್ದ ಮಾತ್ರಕ್ಕೆ ಗೀತೆಯಲ್ಲಿ ಸರಳ ಸಂಸ್ಕೃತವಾಗಿ ಕಾಣುವ ಪವಿತ್ರವಚನಗಳಲ್ಲಿರುವ ಶ್ರೀ ಭಗವಂತನ ನಿಜವಾದ ಭಾವ ತಿಳಿದುಬಿಡುವುದಿಲ್ಲ. ಮೊದಲಿನಿಂದಲೂ ಪ್ರಕರಣವನ್ನು ಶ್ರದ್ಧೆಯಿಂದ ಸಮಂಜಸ ಅರ್ಥ ಬರುವಂತೆ ಅನುಸರಿಸುತ್ತಾ

ಬರಬೇಕು, ಸದ್ ಗುರುಕೃಪೆಯನ್ನು ಅವಲಂಬಿಸಿಕೊಂಡೇ ಅಧ್ಯಯನ ಶೀಲನಾಗಬೇಕು. ಅನ್ಯಥಾ ತಪ್ಪರ್ಥಗಳ ಹಳ್ಳಗಳಿಗೆ ಪದೇ ಪದೇ ಬೀಳುವ ಅಪಾಯ ಗೀತೆಯುದ್ದಕ್ಕೂ ಇದ್ದೇ ಇದೆ. ಬೀಳದಂತೆ ಭಗವಂತನು ಸದಾಚಾರ್ಯ ಕೃಪೆ ನೀಡಲಿ.

॥ ವರ್ಧತಾಮ್ ಆಚಾರ್ಯಕೃಪಾಪರೀವಾಹಃ ॥



ಮುಂದೆ ಬರಲಿರುವವು :

೧) ದಿವ್ಯವಾತ್ಸಲ್ಯಾಮೃತವಾಹಿನೀ (ಶ್ರೀಭಗವದ್ಗೀತಾ) ೨ ನೇ ಸಂಪುಟ

೨) ದಿವ್ಯವಾತ್ಸಲ್ಯಾಮೃತವಾಹಿನೀ (ಶ್ರೀಭಗವದ್ಗೀತಾ) ೩ ನೇ ಸಂಪುಟ

(೩ ರಿಂದ ೫) ದಿವ್ಯವಾತ್ಸಲ್ಯಾಮೃತವಾಹಿನೀ (ಶ್ರೀಭಗವದ್ಗೀತಾ) ಲಘುವಿಸ್ತಾರವ್ಯಾಖ್ಯಾನ

(೪ ರಿಂದ ೨೩) ದಿವ್ಯವಾತ್ಸಲ್ಯಾಮೃತವಾಹಿನೀ (ಶ್ರೀಭಗವದ್ಗೀತಾ) ಬೃಹತ್ ವಿಸ್ತಾರ ವ್ಯಾಖ್ಯಾನ

೨೪) ದಿವ್ಯವಾತ್ಸಲ್ಯಾಮೃತವಾಹಿನೀ (ಶ್ರೀಭಗವದ್ಗೀತಾ) ಮೂಲ ಮಾತ್ರ

೨೫) ಗೀತೆಯ ಕಿರು ಪರಿಚಯ

ಪ್ರತಿಗಳು ದೊರೆಯುವ ಸ್ಥಳ :

(೧) ವೀ. ರಂ. ವರದರಾಜೈಯಂಗಾರ್ಯರು
''ವರದ ವಲ್ಲಭಾ'' ''ಶ್ರೀಯದುಶೈಲನರಸಿಂಹ''
ಸಂಸ್ಕೃತ ಪುರಂ, ದ್ಯಾವಪ್ಪನ ಕೊಪ್ಪಲಿನ ದಕ್ಷಿಣಕ್ಕೆ
ವಿದ್ಯುತ್ ನಗರದ ಪಶ್ಚಿಮಕ್ಕೆ ಹಾಸನ.

(೨) ಆದರ್ಶ ಮುದ್ರಣಾಲಯ, ಹಾಸನ.

## ಗೀತೆಗೆ ನಿಮ್ಮದೊಂದು ಸೇವೆ

ದಿವ್ಯವಾತ್ಸಲ್ಯಾಮೃತವಾಹಿನೀ ಶ್ರೀಭಗವದ್ಗೀತಾ
ಇದರ ಮುಂದಿನ ೨೫ ಸಂಪುಟಗಳ ಮುದ್ರಣಕ್ಕಾಗಿ ತಮ್ಮ ತಮ್ಮ
ಅನ್ತಃಪ್ರೇರಣಾನುಗುಣವಾಗಿ ಆರ್ಥಿಕ ಸಹಾಯ ಮಾಡಿ ರಶೀತಿ ಪಡೆದು
ಬೆಲೆಗೆ ಸಮನಾಗಿ ಮುದ್ರಿತ ಪ್ರತಿಗಳನ್ನು ಮುಖತಃ ಅಥವಾ
ಅಂಚೆಯ ಮೂಲಕ ಪಡೆಯಬಹುದು.